ಸಂಜೆವಾಣಿ ಬುಧವಾರ 31 ಡಿಸೆಂಬರ್ 2008




ಶೇಷಾದ್ರಿಪುರಂ ಸಂಯುಕ್ತ ಪದವಿ ಪೂರ್ವ ಕಾಲೇಜಿನಲ್ಲಿ ನಡೆದ ವಾರ್ಷಿಕೋತ್ಸವ ಸಮಾರಂಭದಲ್ಲಿ ಸುಪ್ರಸಿದ್ಧ ಗಾಯಕ ಆರ್.ಕೆ. ಪದ್ಮನಾಭ ಅವರನ್ನು ಸನ್ಮಾನಿಸಲಾಯಿತು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಗೌರವ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಸಹಾಯಕ ಕಾರ್ಯದರ್ಶಿ ಕೆ. ಸರೋಜ, ಪ್ರಾಂಶುಪಾಲ ಪ್ರೊ. ಎಂ.ಆರ್. ಸಂತಾನಮ್ ಮತ್ತಿತರರು ಹಾಜರಿದ್ದರು.



ನಗರದ ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನಲ್ಲಿ ಹಮ್ಮಿಕೊಳ್ಳಲಾಗಿದ್ದ ಪ್ರತಿಭಾ ಕಾರಂಜಿ-08 ವಾರ್ಷಿಕೋತ್ಸವ ಸಮಾರಂಭವನ್ನು ನಟ ಶಿವರಾಜ್‌ಕುಮಾರ್ ಉದ್ಘಾಟಿಸಿದರು. ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಕಾರ್ಯದರ್ಶಿ ವೂಡೇ.ಪಿ.ಕೃಷ್ಣ ಪ್ರಾಂಶುಪಾಲ ಆರ್.ಶ್ರೀನಿವಾಸ್ ಮತ್ತಿತರರು ಇದ್ದರು.

ಸಂಜೆವಾಣಿ
ಮಂಗಳವಾರ 30 ಡಿಸೆಂಬರ್ 2008

# ಶೇಷಾದ್ರಿಪುರಂ ಕಾಲೇಜಿನ ವಾರ್ಷಿಕೋತ್ಸವ

ಬೆಂಗಳೂರು, ಡಿ. ೩೦- ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನ ವಾರ್ಷಿಕೋತ್ಸವ ಹಾಗೂ ಪ್ರತಿಭಾ ಕಾರಂಜಿ ಸಮಾರಂಭವನ್ನು ನಾಳೆ ಬೆಳಿಗ್ಗೆ 9ಕ್ಕೆ ಏರ್ಪಡಿಸಲಾಗಿದೆ.

ಕಾಲೇಜಿನ ಕುವೆಂಪು ರಂಗಮಂದಿರದಲ್ಲಿ ನಡೆಯುವ ಈ ಕಾರ್ಯಕ್ರಮವನ್ನು ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕ ಕೆ.ವಿ.ಆರ್. ಠ್ಯಾಗೋರ್ ಅವರು ಉದ್ಘಾಟಿಸಲಿದ್ದು, ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ ಅವರು ಅಧ್ಯಕ್ಷತೆ ವಹಿಸುವರು.

ನಟ ಶಿವರಾಜ್‌ಕುಮಾರ್ ಹಾಗೂ ಶಿಕ್ಷಣ ದತ್ತಿ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ. ಪಿ. ಕೃಷ್ಣ ಅವರು ವಿಶೇಷ ಆಹ್ವಾನಿತರಾಗಿ ಭಾಗವಹಿಸುವರು. ಇದೇ ಸಂದರ್ಭದಲ್ಲಿ ಕಾಲೇಜಿನ ವಿದ್ಯಾರ್ಥಿ, ವಿದ್ಯಾರ್ಥಿನಿಯರಿಂದ ಸಾಂಸ್ಕೃತಿಕ ಹಾಗೂ ಮನರಂಜನಾ ಕಾರ್ಯಕ್ರಮಗಳು ಜರುಗಲಿವೆ.

ಪ್ರಜಾವಾಣಿ

ಸೋಮವಾರ 29ನೇ ಡಿಸೆಂಬರ್ 2008

ಹೊರನಾಡ ಕನ್ನಡಿಗರು



ಕತಾರ್‌ನ ದೋಹದಲ್ಲಿ ನಡೆದ ವಿಶ್ವಕನ್ನಡ ಸಂಸ್ಕೃತಿ ಸಮ್ಮೇಳನದಲ್ಲಿ ಖ್ಯಾತ ಸ್ತ್ರೀರೋಗ ತಜ್ಞೆ ಡಾ. ಪದ್ಮಿನಿ ಪ್ರಸಾದ್ ಅವರನ್ನು ಸಾಹಿತಿ ಡಾ. ಚಂದ್ರಶೇಖರ ಕಂಬಾರ 'ವಿಶ್ವಮಾನ್ಯರು' ಪ್ರಶಸ್ತಿ ನೀಡಿ ಗೌರವಿಸಿದರು. ಕತಾರ್ ಕರ್ನಾಟಕ ಸಂಘದ ಅಧ್ಯಕ್ಷ ಅರವಿಂದಪಾಟೀಲ್, ಸಮ್ಮೇಳನ ಸಮಿತಿ ಅಧ್ಯಕ್ಷ ಕೆ.ಪಿ. ಮಂಜುನಾಥ ಸಾಗರ್, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಮುಖ್ಯಮಂತ್ರಿ ಚಂದ್ರು ಹಾಗೂ ಕುವೈತ್ ಕನ್ನಡ ಸಂಘದ ಸುಧಾಕರಶೆಟ್ಟಿ ಚಿತ್ರದಲ್ಲಿದ್ದಾರೆ.

# 'ಭಾಷೆ ಹೋರಾಟ ಕರ್ನಾಟಕದಲ್ಲಿ ಮಾತ್ರ'

ದೋಹ (ಕತಾರ್): ಭಾಷೆ ವಿಚಾರದಲ್ಲಿ ಹೋರಾಟ ಮಾಡಬೇಕಾದ ಪರಿಸ್ಥಿತಿ ಕರ್ನಾಟಕದಲ್ಲಿ ಮಾತ್ರ ಇದೆ. ನೆರೆಯ ಯಾವ ರಾಜ್ಯದಲ್ಲೂ ಇಲ್ಲ. ಇದನ್ನು ಹೊರನಾಡ ಕನ್ನಡಿಗರು ಮನಗಾಣಬೇಕಿದೆ ಎಂದು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ 'ಮುಖ್ಯಮಂತ್ರಿ' ಚಂದ್ರು ಇಲ್ಲಿ ಹೇಳಿದರು.

ಈ ಹಿನ್ನೆಲೆಯಲ್ಲಿ ಪ್ರತಿಯೊಬ್ಬ ಕನ್ನಡಿಗನೂ ತಮ್ಮ ಭಾಷೆ ಮತ್ತು ಸಂಸ್ಕೃತಿ ಬಗ್ಗೆ ಅಭಿಮಾನ ಬೆಳೆಸಿಕೊಳ್ಳಬೇಕಾದ ಅಗತ್ಯ ಇದೆ ಎಂದರು.

ಕತಾರ್ ಕರ್ನಾಟಕ ಸಂಘ ಮತ್ತು ಮಂಗಳೂರಿನ ಹೃದಯವಾಹಿನಿ ಪತ್ರಿಕೆಗಳ ಜಂಟಿ ಆಶ್ರಯದಲ್ಲಿ ಏರ್ಪಡಿಸಿದ್ದ ಎರಡು ದಿನಗಳ 5ನೇ ವಿಶ್ವ ಕನ್ನಡ ಸಂಸ್ಕೃತಿ ಸಮ್ಮೇಳನದ ಸಮಾರೋಪ ಸಮಾರಂಭದಲ್ಲಿ ಮಾತನಾಡಿದ ಅವರು ಕರ್ನಾಟಕ ಹಲವಾರು ಸಮಸ್ಯೆಗಳ ಸುಳಿಯಲ್ಲಿ ಸಿಲುಕಿದೆ. ಅನಿವಾಸಿ ಕನ್ನಡಿಗರ ಸಮಸ್ಯೆಗಳನ್ನು ಬಗೆಹರಿಸಲು ರಾಜ್ಯ ಸರ್ಕಾರ ಶಾಸಕರೊಬ್ಬರ ನೇತೃತ್ವದಲ್ಲಿ ಪ್ರತ್ಯೇಕ ಘಟಕವೊಂದನ್ನು ಸ್ಥಾಪಿಸಿದ್ದು ಆ ನಿಟ್ಟಿನಲ್ಲಿ ಪ್ರಾಮಾಣಿಕ ಪ್ರಯತ್ನ ನಡೆಸಿದೆ ಎಂದರು.

'ನಾನು ಅಭಿಮಾನದ ಮುಖ್ಯಮಂತ್ರಿ, ಅಧಿಕಾರದ ಮುಖ್ಯಮಂತ್ರಿ ಅಲ್ಲ' ಆದರೂ ಪ್ರಾಧಿಕಾರದ ವತಿಯಿಂದ ಈ ಸಮ್ಮೇಳನಕ್ಕೆ 50 ಸಾವಿರ ರೂಪಾಯಿ ಧನಸಹಾಯ ನೀಡುತ್ತಿರುವುದಾಗಿ ಹೇಳಿ ಚೆಕ್ ಅನ್ನು ಸಮ್ಮೇಳನದ ಸಂಘಟಕರಿಗೆ ಹಸ್ತಾಂತರಿಸಿದರು.

ವಿದೇಶಿ ಕನ್ನಡ ಸಂಘಗಳಿಗೆ ಪ್ರಾಧಿಕಾರದ ವತಿಯಿಂದ ಕನ್ನಡ ಪುಸ್ತಕಗಳನ್ನು ಒದಗಿಸಲಾಗುವುದು ಎಂದ ಅವರು ಹೊರನಾಡಿನಲ್ಲಿ ನಡೆಯುವ ಇಂತಹ ಕನ್ನಡ ಸಮ್ಮೇಳನಗಳಿಗೆ ಏಕರೂಪ ಧನಸಹಾಯದ ಬಗ್ಗೆ ಸರ್ಕಾರ ಚಿಂತನೆ ನಡೆಸಲಿದೆ ಎಂದರು. ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದ ಸಾಹಿತಿ ಡಾ.ಚಂದ್ರಶೇಖರ ಕಂಬಾರ ಅವರು ಭಾಷೆ ಮತ್ತು ಸಂಸ್ಕೃತಿ ಕುರಿತು ಗಂಭೀರ ಚರ್ಚೆ ನಡೆದಿದ್ದು ಶ್ಲಾಘನೀಯ ಎಂದು ಸಂಘಟಕರನ್ನು ಅಭಿನಂದಿಸಿದರು.

ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ಕುವೈತ್ ಕನ್ನಡ ಸಂಘದ ಸುಧಾಕರಶೆಟ್ಟಿ, ಪ್ರಭಾಕರ ಕೋರೆ (ಶಿಕ್ಷಣ), ಡಾ. ಪದ್ಮಿನಿಪ್ರಸಾದ್ (ವೈದ್ಯಕೀಯ), ಸುಹಾಸ್ ಗೋಪಿನಾಥ್ (ಮಾಹಿತಿ ತಂತ್ರಜ್ಞಾನ), ಶಂಕರ್ ಚಿಂತಾಮಣಿ (ಛಾಯಾಗ್ರಹಣ), ಪಿ.ವೈ. ರಾಜೇಂದ್ರಕುಮಾರ್ (ಗ್ರಂಥಾಲಯ), ಚಂದ್ರಿಕಾ ಗುರುರಾಜ್, ಅಜಯ್‌ವಾರಿಯರ್ ಮತ್ತು ವೆಂಕಟೇಶ ಗೋಡ್ಖಿಂಡಿ (ಸಂಗೀತ), ಯಶವಂತ್ ಸರದೇಶಪಾಂಡೆ (ಅಭಿನಯ), ವೂಡೆ ಪಿ. ಕೃಷ್ಣ, ಇ. ಆಂಜನೇಯ, ಎಚ್. ರಂಗಯ್ಯ ಮತ್ತು ಪುಟ್ಟಸ್ವಾಮಿಗೌಡ (ಎಲ್ಲರೂ ಸಮಾಜಸೇವೆ) ಅವರನ್ನು 'ವಿಶ್ವಮಾನ್ಯರು-2008' ಪ್ರಶಸ್ತಿ ನೀಡಿ ಗೌರವಿಸಲಾಯಿತು.

ಕತಾರ್ ಕರ್ನಾಟಕ ಸಂಘದ ಅಧ್ಯಕ್ಷ ಅರವಿಂದ ಪಾಟೀಲ್, ಸಮ್ಮೇಳನ ಸಮಿತಿ ಅಧ್ಯಕ್ಷ ಕೆ.ಪಿ.ಮಂಜುನಾಥ ಸಾಗರ್ ಮತ್ತು ಪದಾಧಿಕಾರಿಗಳು ಉಪಸ್ಥಿತರಿದ್ದರು.



ಮಾಧವನಗರ ಲಯನ್ಸ್ ಸಂಸ್ಥೆ ಹಾಗೂ ವೋಕಾರ್ಡ್ ಆಸ್ಪತ್ರೆ ಸಹಯೋಗದೊಂದಿಗೆ ನಡೆದ ಉಚಿತ ಹೃದಯ ತಪಾಸಣಾ ಶಿಬಿರವನ್ನು ದಿನೇಶ್ ಗುಂಡೂರಾವ್ ಉದ್ಘಾಟಿಸಿದರು. ಅಂತಾರಾಷ್ಟ್ರೀಯ ಲಯನ್ಸ್ ಸಂಸ್ಥೆ ಜಿಲ್ಲಾ ಗವರ್ನರ್ ಕೆ. ವಂಶೀಧರ್‌ಬಾಬು, ರಾಜ್ಯರೆಡ್‌ಕ್ರಾಸ್ ಉಪಾಧ್ಯಕ್ಷ ವೂಡೆ ಪಿ. ಕೃಷ್ಣ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಲಯನ್ಸ್ ಅಧ್ಯಕ್ಷ ಜಿ. ಕಮಲನಾಥನ್ ಭಾಗವಹಿಸಿದ್ದರು.

ಮಂಗಳವಾರ, 16 ಡಿಸೆಂಬರ್, 2008




ಅಂತಾರಾಷ್ಟ್ರೀಯ ರೆಡ್‌ಕ್ರಾಸ್ ಸಂಸ್ಥೆ ಮತ್ತು ರೆಡ್‌ಕ್ರಾಸ್ ಶಾಖೆ ಜಂಟಿಯಾಗಿ ಹಮ್ಮಿಕೊಂಡಿದ್ದ ತರಬೇತಿ ಶಿಬಿರದ ಉದ್ಘಾಟನೆ ಸಮಾರಂಭದಲ್ಲಿ ರಾಜ್ಯ ಶಾಖೆ ಉಪಾಧ್ಯಕ್ಷ ವೂಡೇಪಿ ಕೃಷ್ಣ, ನಿರ್ದೇಶಕ ಎನ್.ಕೆ. ಸಿಂಗ್, ಕೋಶಾಧ್ಯಕ್ಷ ರಾಜುಚಂದ್ರಶೇಖರ್ ಮತ್ತು ಮೀರಾ ಶಿವಲಿಂಗಯ್ಯ ಪಾಲ್ಗೊಂಡಿದ್ದರು.

**ನೇತ್ರದಾನ ಮಾಡಿ ದೃಷ್ಟಿ ಭಾಗ್ಯ ನೀಡಿ**

ಭಾನುವಾರ, 14 ಡಿಸೆಂಬರ್ 2008 ಕನ್ನಡಪ್ರಭ, ಬೆಂಗಳೂರು ಮಂಡ್ಯ ಪ್ರದೇಶ

## ರೆಡ್‌ಕ್ರಾಸ್ ಚಿಹ್ನೆ ದುರ್ಬಳಕೆ: ಶಿಬಿರ

ಮಂಡ್ಯ: ರೆಡ್‌ಕ್ರಾಸ್ ಸಂಸ್ಥೆ ಚಿಹ್ನೆ ದುರ್ಬಳಕೆ ಕುರಿತು ಜಾಗೃತಿ ಮೂಡಿಸುವ ಅಂಗವಾಗಿ, ಐದು ದಿನಗಳ ಕಾಲ ನಗರದಲ್ಲಿ ಕಾರ್ಯಾಗಾರವೊಂದನ್ನು ಆಯೋಜಿಸಲಾಗಿದೆ ಎಂದು ಸಂಸ್ಥೆಯ ರಾಜ್ಯ ಶಾಖೆ ಉಪಾಧ್ಯಕ್ಷ ವೂಡೇ ಪಿ.ಕೃಷ್ಣ ಶನಿವಾರ ತಿಳಿಸಿದರು. ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು, ರೆಡ್‌ಕ್ರಾಸ್ ಚಿಹ್ನೆಯನ್ನು ಕೆಲವು ಮಂದಿ ದುರುಪಯೋಗಪಡಿಸಿಕೊಳ್ಳುತ್ತಿದ್ದಾರೆ. ಸಂಸ್ಥೆಯ ಚಿಹ್ನೆ 1864ರ ಜಿನಿವಾ ಒಪ್ಪಂದದಂತೆ ಜಾರಿಗೆ ಬಂದಿದೆ. ಈ ಚಿಹ್ನೆಯನ್ನು ರೆಡ್‌ಕ್ರಾಸ್ ಸಂಸ್ಥೆಯ ರಕ್ಷಣಾ ಪಡೆಯ ವೈದ್ಯಕೀಯ ಸಿಬ್ಬಂದಿ ವರ್ಗದ ಸದಸ್ಯರು ಮಾತ್ರ ಉಪಯೋಗಿಸಬೇಕು ಎಂದು ಹೇಳಿದರು. ಔಷಧಿ ವ್ಯಾಪಾರಿಗಳು, ಆಸ್ಪತ್ರೆ, ನರ್ಸಿಂಗ್ ಹೋಮ್, ವೈದ್ಯರು, ಆಂಬ್ಯುಲೆನ್ಸ್, ಲ್ಯಾಬೋರೇಟರಿಗಳಂತಹ ಕೆಲವು ಸಂಸ್ಥೆಗಳು ಚಿಹ್ನೆಯನ್ನು ದುರ್ಬಳಕೆ ಮಾಡಿಕೊಳ್ಳುತ್ತಿರುವುದು ಗಮನಕ್ಕೆ ಬಂದಿರುವ ಕಾರಣಕ್ಕಾಗಿ ಈ ಕುರಿತು ಕಾರ್ಯಾಗಾರ ನಡೆಸಲಾಗುತ್ತಿದೆ ಎಂದು ತಿಳಿಸಿದರು. ಶನಿವಾರದಿಂದ (ಡಿ.13) ಡಿ. 17 ರವರೆಗೆ ನಡೆಯುವ ಈ ಕಾರ್ಯಾಗಾರದಲ್ಲಿ ವಿಚಾರ ಸಂಕಿರಣ, ಸ್ವಯಂ ಸೇವಕರಿಗೆ ತರಬೇತಿ ನೀಡಲಾಗುವುದು. ಇದರಲ್ಲಿ ಆರೋಗ್ಯ ವಿಭಾಗದ ಎಲ್ಲಾ ವ್ಯಕ್ತಿಗಳು ಪಾಲ್ಗೊಳ್ಳುತ್ತಾರೆ ಎಂದು ಹೇಳಿದರು. ಗೋಷ್ಠಿಯಲ್ಲಿ ಮೀರಾ ಶಿವಲಿಂಗಯ್ಯ, ಎನ್.ಕೆ.ಸಿಂಗ್, ನಾಗರಾಜು, ರಾಜು ಚಂದ್ರಶೇಖರ್, ಎನ್.ಡಿ.ನಾರಾಯಣ್ ಉಪಸ್ಥಿತರಿದ್ದರು.

ಆಂದೋಲನ [illegible]

## ರೆಡ್‌ಕ್ರಾಸ್ ಚಿಹ್ನೆ ದುರ್ಬಳಕೆ– ಆರೋಪ

[illegible]

ಪುಟ-2 ಸಂಪಾದಕ: ಎಂ.ಆರ್. ಪ್ರಸನ್ನಕುಮಾರ್ ದಿನಾಂಕ:14ನೇ ಡಿಸೆಂಬರ್ ಭಾನುವಾರ, 2008

# ರೆಡ್‌ಕ್ರಾಸ್ ಚಿಹ್ನೆ ದುರ್ಬಳಕೆ ಶಿಕ್ಷಾರ್ಹ ಅಪರಾಧ

ಸ್ಟಾರ್ ರವಾನಿ

ಮಂಡ್ಯ, ಡಿ. 13- ರೆಡ್‌ಕ್ರಾಸ್ ಸಂಸ್ಥೆಯ ಚಿಹ್ನೆಯನ್ನು ಸಂಸ್ಥೆ ಮಾತ್ರ ಉಪಯೋಗಿಸಬಹುದಾಗಿದ್ದು ಇದನ್ನು ದುರುಪಯೋಗಪಡಿಸಿಕೊಂಡಲ್ಲಿ ಅಂತಹವರು ವಿರುದ್ಧ ಶಿಕ್ಷಾರ್ಹ ಅಪರಾಧ ಮಾಡಿದಂತಾಗುತ್ತದೆ ಎಂದು ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ ಎಚ್ಚರಿಕೆ ನೀಡಿದರು.

ಸುದ್ದಿಗೋಷ್ಠಿಯನ್ನುದ್ದೇಶಿಸಿ ಮಾತನಾಡುತ್ತಿದ್ದ ಅವರು, 1864ರ ಜಿನಿವಾ ಒಪ್ಪಂದಗಳ ಅನ್ವಯ ಜಾರಿಗೆ ಬಂದಿದ್ದು ಈ ಚಿಹ್ನೆಯನ್ನು ರೆಡ್‌ಕ್ರಾಸ್ ಸಂಸ್ಥೆಯ ರಕ್ಷಣಾ ಪಡೆಯ ವೈದ್ಯಕೀಯ ಸಿಬ್ಬಂದಿ ವರ್ಗದವರು, ಸದಸ್ಯರು ಮಾತ್ರ ಉಪಯೋಗಿಸಬಹುದಾಗಿದೆ ಎಂದರು.

ಔಷಧಿ ವ್ಯಾಪಾರಿಗಳು, ಆಸ್ಪತ್ರೆಗಳು, ನರ್ಸಿಂಗ್ ಹೋಂ, ವೈದ್ಯರು, ಆಂಬ್ಯುಲೆನ್ಸ್, ಲ್ಯಾಬೋರೇಟರಿ ಅಥವಾ ಬೇರಾವ ವೃತ್ತಿಗಳ ಕಾರ್ಯಕರ್ತರು ಉಪಯೋಗಿಸುವ ಆಗಿಲ್ಲ ಎಂದ ಅವರು, ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯು ಐಸಿಆರ್‌ಸಿ ಸಹಯೋಗದೊಂದಿಗೆ ಎಲ್ಲ ರಾಜ್ಯಗಳಲ್ಲಿ ಹಾಗೂ ಜಿಲ್ಲೆಗಳಲ್ಲಿ ರೆಡ್‌ಕ್ರಾಸ್ ಚಿಹ್ನೆ ದುರ್ಬಳಕೆಯ ಬಗ್ಗೆ ಜನಜಾಗೃತಿ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ ಎಂದು ಹೇಳಿದರು.

Use These — Doctor, Hospital, Ambulance, Pharmacy

Don't Use — RED CROSS

It is an offence.

Only Red Cross Movement Members and Army Medical Corps can use it.

ಇಂದು ನಗರದಲ್ಲಿ ಸ್ವಯಂ ಸೇವಾ ಕಾರ್ಯಕರ್ತರ ಹಾಗೂ ಕಾಲೇಜು ವಿದ್ಯಾರ್ಥಿಗಳಿಗೆ ಒಂದು ದಿನದ ತರಬೇತಿ ಕಾರ್ಯಾಗಾರವನ್ನು ಹಮ್ಮಿಕೊಂಡಿದ್ದು ತರಬೇತಿ ಪಡೆದ ಸ್ವಯಂ ಸೇವಾ ಕಾರ್ಯಕರ್ತರು ಹಾಗೂ ವಿದ್ಯಾರ್ಥಿಗಳು ಐದು ದಿನಗಳ ಕಾಲ ಔಷಧಿ ವ್ಯಾಪಾರಿಗಳು ಹಾಗೂ ಆಸ್ಪತ್ರೆಗಳಿಗೆ ತೆರಳಿ ಜಾಗೃತಿ ಮೂಡಿಸಲಿದ್ದಾರೆ ಎಂದು ವಿವರಿಸಿದರು.

ರೆಡ್ ಕ್ರಾಸ್ ಚಿಹ್ನೆಯನ್ನು ದುರ್ಬಳಕೆ ಮಾಡಿಕೊಂಡವರಿಗೆ 500 ರೂ. ದಂಡ ವಾಹನಗಳಲ್ಲಿ ಬಳಕೆ ಮಾಡಿಕೊಂಡಲ್ಲಿ ಅಂದಹ ವಾಹನವನ್ನು ಮನ್ನುಗಳ ಸಮೇತ ಮುಟ್ಟುಗೋಲು ಹಾಕಿಕೊಳ್ಳುವಂತಹ ಕಾಯಿದೆ ಜಾರಿಗೊಳಿಸಲಾಗಿದ್ದರೂ ದರೂ ಈ ಬಗ್ಗೆ ಸಾರ್ವಜನಿಕರಲ್ಲಿ ಅರಿವು ಇಲ್ಲದೆ ಇರುವುದರಿಂದ ಕಾಯಿದೆ ಇನ್ನೂ ಅನುಷ್ಠಾನಗೊಂಡಿಲ್ಲ ಎಂದು ಅವರು ವಿಷಾದ ವ್ಯಕ್ತಪಡಿಸಿದರು.

ಈ ಹಿನ್ನೆಲೆಯಲ್ಲಿ ರಾಜ್ಯದ ಎಲ್ಲ ಜಿಲ್ಲೆಗಳಲ್ಲೂ ಸಹ ಜಾಗೃತಿ ಮೂಡಿಸುವ ವಿನೂತನ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ ಎಂದು ಅವರು ತಿಳಿಸಿದರು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಷ್ಟ್ರೀಯ ನಿರ್ದೇಶಕ ಎಸ್.ಕೆ. ಸಿಂಗ್ ಅವರು ಮಾತನಾಡುತ್ತಾ, ರೆಡ್‌ಕ್ರಾಸ್ ಸಂಸ್ಥೆಯ ಚಿಹ್ನೆಯ ಬಗ್ಗೆ ಸಾರ್ವಜನಿಕರಿಗೆ ಮಾಹಿತಿ ಇಲ್ಲದೇ ಇರುವುದು ಇಂತಹ ದುರ್ಬಳಕೆಗೆ ಕಾರಣವಾಗಿದೆ ಎಂದರು.

ದುರ್ಬಳಕೆ ಮಾಡಿಕೊಂಡವರಿಗೆ 30 ಸಾವಿರ ರೂ. ದಂಡ ಹಾಗೂ ಶಿಕ್ಷೆ ವಿಧಿಸುವಂತಹ ಕಾನೂನನ್ನು ಜಾರಿಗೊಳಿಸುವ ಬಗ್ಗೆ ಸರ್ಕಾರಕ್ಕೆ ಸಂಸ್ಥೆ ಪ್ರಸ್ತಾವನೆ ಸಲ್ಲಿಸಿದ್ದು ಈ ಬಗ್ಗೆ ಸರ್ಕಾರ ಕ್ರಮ ಕೈಗೊಳ್ಳಬೇಕಿದೆ ಎಂದು ಹೇಳಿದರು.

ರೆಡ್‌ಕ್ರಾಸ್ ಜಿಲ್ಲಾ ಉಪಾಧ್ಯಕ್ಷ ಮೀರಾ ಶಿವಲಿಂಗಯ್ಯ, ರಾಜ್ಯ ಖಜಾಂಚಿ ಚಂದ್ರಶೇಖರ್, ಕಾರ್ಯದರ್ಶಿ ಎಂ.ಬಿ. ನಾರಾಯಣ್, ಜಿಲ್ಲಾ ಆಸ್ಪತ್ರೆ ವೈದ್ಯಕೀಯ ಅಧೀಕ್ಷಕ ಡಾ. ರಾಮಲಿಂಗೇಗೌಡ ಮತ್ತಿತರರು ಗೋಷ್ಠಿಯಲ್ಲಿ ಉಪಸ್ಥಿತರಿದ್ದರು.

ಸಂಪುಟ: 2 ಸಂಚಿಕೆ:76 ಮಂಡ್ಯ ದೂ.ಸಂ. 402683 ಶನಿವಾರ, ಡಿಸೆಂಬರ್ 13 2008 ಪುಟ ಸಂಜೆ ಕನ್ನಡ ದಿನಪತ್ರಿಕೆ

# ರೆಡ್ ಕ್ರಾಸ್ ಚಿಹ್ನೆ ದುರ್ಬಳಕೆ: ವೂಡೇ ಪಿ. ಕೃಷ್ಣ

ಸಂಜೆ ಕಾರ

ಮಂಡ್ಯ ಡಿ.13- ಅತ್ಯಂತ ಶ್ರೇಷ್ಠ ಕೆಲಸಕ್ಕೆ ಉಪಯೋಗಿಸುವ ಮೌಲ್ಯಯುತವಾದ ರೆಡ್‌ಕ್ರಾಸ್ ಚಿಹ್ನೆಯನ್ನು ಎಲ್ಲ ವೈದ್ಯಕೀಯ ವಿಭಾಗದಲ್ಲಿ ಬಳಸುವುದರ ಮೂಲಕ ದುರ್ಬಳಕೆ ಮಾಡಿಕೊಳ್ಳುತ್ತಿದ್ದಾರೆ ಎಂದು ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಕರ್ನಾಟಕ ಶಾಖೆಯ ಉಪಸಭಾಧ್ಯಕ್ಷರಾದ ವೂಡೇ ಪಿ.ಕೃಷ್ಣ ವಿಷಾದ ವ್ಯಕ್ತಪಡಿಸಿದ್ದಾರೆ.

ಅಂತರರಾಷ್ಟ್ರೀಯ ರೆಡ್‌ಕ್ರಾಸ್ ಸಂಸ್ಥೆ ಮತ್ತು ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಸಹಯೋಗದಲ್ಲಿ ನಗರದ ಪಿಸ್.ಬಿ.ಸಮುದಾಯ ಭವನದಲ್ಲಿ ಆಯೋಜಿಸಿದ್ದ ರೆಡ್‌ಕ್ರಾಸ್ ಚಿಹ್ನೆ ದುರ್ಬಳಕೆ ಬಗ್ಗೆ ಕಾರ್ಯಾಗಾರ ಮತ್ತು ಸ್ವಯಂ ಸೇವಕರಿಗೆ ತರಬೇತಿ ಶಿಬಿರವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ಯುದ್ಧ, ಪ್ರಕೃತಿ ವಿಕೋಪದ ಸಂದರ್ಭದಲ್ಲಿ ವಿಶಿಷ್ಟ ಸೇವೆ ಮಾಡುವ ಉದ್ದೇಶದಿಂದ ರೆಡ್‌ಕ್ರಾಸ್ ಸಂಸ್ಥೆ ಈ ಚಿಹ್ನೆಯನ್ನು ಬಳಸುತ್ತಿದೆ ಆದರೆ ಆಸ್ಪತ್ರೆಗಳಲ್ಲಿ, ಮೆಡಿಕಲ್ ಸ್ಟೋರ್‌ಗಳಲ್ಲಿ ಆಂಬುಲೆನ್ಸ್ ಮತ್ತಿತರ ಕಡೆಗಳ ಚಿಹ್ನೆ ಬಳಸುತ್ತಿದ್ದಾರೆ, ಇದರಿಂದ ಆ ಚಿಹ್ನೆಗೆ ಇರುವ ಮೌಲ್ಯ ಹಾಳಾಗುತ್ತಿದೆ ಎಂದು ಬೇಸರ ವ್ಯಕ್ತಪಡಿಸಿದರು.

ಚಿಹ್ನೆಯ ದುರ್ಬಳಕೆಯನ್ನು ತಡೆಯುವ ನಿಟ್ಟಿನಲ್ಲಿ ಭಾರತ ಸರ್ಕಾರ 1960ರಲ್ಲಿ ಒಂದು ಕಾನೂನು ತಂದಿತು. ಆ ಪ್ರಕಾರ ಈ ಚಿಹ್ನೆಯನ್ನು ಅನವಶ್ಯಕವಾಗಿ ಬಳಸಿದವರಿಗೆ 500ರೂ ದಂಡ ಹಾಗೂ ಯಾವ ಜಾಗದಲ್ಲಿ ಬಳಸಿರುತ್ತಾರೆಯೋ ಆ ಜಾಗವನ್ನು ವಶಪಡಿಸಿಕೊಳುವುದು ಎಂದು ಆದರೆ ಸರ್ಕಾರ ಉತ್ತಮವಾಗಿ ಜಾರಿಗೊಳಿಸಲು ಪ್ರತ್ಯೇಕ ಪ್ರಾಧಿಕಾರವನ್ನು ರಚಿಸದೆ ಕಾನೂನು ವ್ಯರ್ಥವಾಯಿತು ಎಂದರು.

ರೆಡ್‌ಕ್ರಾಸ್ ಸಂಸ್ಥೆಯ ವಿಶ್ವದಲ್ಲಿಯೇ 2ನೇ ಮೌಲ್ಯಯುತ ಸ್ಥಾನಪಡೆದಿದೆ. ಎಂತಹ ದೊಡ್ಡ ಯುದ್ಧ ನಡೆಯುತಿದ್ದ ಸಂದರ್ಭದಲ್ಲಿಯೂ ರೆಡ್‌ಕ್ರಾಸ್ ಸಂಸ್ಥೆ ಚಿಹ್ನೆ ಉಳ್ಳ ವ್ಯಕ್ತಿಯೂ ಸೇವೆಯಲ್ಲಿ ನಿರತರಾಗಿದ್ದರೆ ಅವರ ಮೇಲೆ ದಾಳಿ ಮಾಡುವುದಿಲ್ಲ, ಇಂತಹ ಅಮೂಲ್ಯ ಚಿಹ್ನೆಯನ್ನು ದುರ್ಬಳಕೆ ಮಾಡಿಕೊಳ್ಳದಂತೆ ತಡೆಯಲು ಜನರು ಜಾಗೃತರಾಗಬೇಕು ಎಂದು ತಿಳಿಸಿದರು.

ನಂತರ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿದ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ರಾಜ್ಯ ಶಾಖೆಯ ಗೌರವ ಕೋಶಾಧ್ಯಕ್ಷರಾದ ರಾಜು ಚಂದ್ರಶೇಖರ್ ಮಾತನಾಡಿ ಈ ಸಂಸ್ಥೆ ಹುಟ್ಟಿರುವುದು ಅಪಾರ ನೋವಿನಲ್ಲಿ ಬಳಲುತ್ತಿರುವ ಜನರಿಗೆ ಸೇವೆ ಮಾಡುವ ಸಲುವಾಗಿ. ಇದು ಜನ್ಮತಾಳಿದ್ದು ಕೂಡ ಯುದ್ಧ ಭೂಮಿಯಲ್ಲಿಯೇ ಎಂದು ವಿವರಿಸಿದರು.

ಇದರ ಸಂಸ್ಥಾಪಕನಾದ ಹೆನ್ರಿ ಡುನ್ಯಾಂಡ್ 1864ರಲ್ಲಿ ಜರುಗಿದ ಒಂದು ಭೀಕರವಾದ ಯುದ್ಧ ಪರಿಸ್ಥಿತಿ ಅವಲೋಕಿಸಿದ. ಅಲ್ಲಿ 40 ಸಾವಿರಕ್ಕಿಂತ ಹೆಚ್ಚು ಸೈನಿಕರು ಸತ್ತು, ಅನೇಕ ಯೋಧರು ಗಾಯದಿಂದ ಯುದ್ಧ ಭೂಮಿಯಲ್ಲಿ ನರಳಾಡುತ್ತಿದ್ದರು. ಇಂತಹ ಪರಿಸ್ಥಿತಿಯನ್ನು ಗಮನಿಸಿದ ಡುನ್ಯಾಂಡ್ ರೆಡ್ ಕ್ರಾಸ್ ಸಂಸ್ಥೆಯನ್ನು ಕಟ್ಟಲು ನಿಶ್ಚಯಿಸಿದರು. ಅಂದಿನಿಂದ ಇಂದಿನ ವರೆಗೂ ಸಂಸ್ಥೆ ಅನೇಕ ಸೇವೆಗಳನ್ನು ಮಾಡಿಕೊಂಡು ಬರುತ್ತಿದೆ. ಸುನಾಮಿ, ಗುಜರಾತ್ ಭೂಕಂಪ ಇದರ ಸೇವೆಗೆ ಸಾಕ್ಷಿಯಾಗಿದೆ. ಆದಕ್ಕಾಗಿಯೇ ಈ ಸಂಸ್ಥೆಗೆ 4 ನೋಬೆಲ್ ಪ್ರಶಸ್ತಿ ದೊರೆತಿದೆ ಎಂದು ತಿಳಿಸಿದರು.

ಇಂತಹ ಮಹತ್ವದ ಸಂಸ್ಥೆಗೆ ಹೆಚ್ಚು ಯುವ ಮನಸ್ಸುಗಳು ಸೇರುವುದರಿಂದ ಪುಣ್ಯ ಬರುತ್ತದೆ. ಇಂತಹ ಸೇವೆ ಮಾಡುವ ಭಾಗ್ಯ ಎಲ್ಲರಿಗೂ ಸಿಗುವುದಿಲ್ಲ ಎಂದರು.

ಕಾರ್ಯಕ್ರಮದಲ್ಲಿ ಸಂಸ್ಥೆಯ ಜಿಲ್ಲಾ ಉಪಸಭಾಧ್ಯಕ್ಷರಾದ ಮೀರಾ ಶಿವಲಿಂಗಯ್ಯ, ಜಿಲ್ಲಾ ಔಷಧ ನಿಯಂತ್ರಣಾಧಿಕಾರಿಗಳಾದ ನಾಗರಾಜು, ಸೇರಿದಂತೆ ಅನೇಕ ಮಂದಿ ಉಪಸ್ಥಿತರಿದ್ದರು.

ಮೈಸೂರು ಮಿತ್ರ ಭಾನುವಾರ ೧೪ ನೇ ಡಿಸೆಂಬರ್ ೨೦೦೮ ಪುಟ ೫

## ರೆಡ್‌ಕ್ರಾಸ್ ಚಿಹ್ನೆ ದುರ್ಬಳಕೆ ಆರೋಪ

ಮಂಡ್ಯ, ಡಿ. ೧೩ - ರೆಡ್‌ಕ್ರಾಸ್ ಸಂಸ್ಥೆಯ ಚಿಹ್ನೆಯನ್ನು ಕೆಲ ಸಂಘ ಸಂಸ್ಥೆಗಳು ದುರ್ಬಳಕೆ ಮಾಡಿಕೊಳ್ಳುತ್ತಿವೆ ಎಂದು ಸಂಸ್ಥೆಯ ಉಪ ಸಭಾಧ್ಯಕ್ಷ ಪ್ರೊ. ಬಿ. ಕೃಷ್ಣ ಆರೋಪಿಸಿದರು.

ನಗರದಲ್ಲಿಂದು ಸುದ್ದಿಗಾರರೊಂದಿಗೆ ಮಾತನಾಡಿದ ಅವರು, ಗಲ್ಲೇರ ಜಿನೀವಾ ಒಪ್ಪಂದಗಳ ಅನ್ವಯ ಜಾರಿಗೆ ಬಂದಿರುವ ಈ ಚಿಹ್ನೆಯನ್ನು ರೆಡ್ ಕ್ರಾಸ್ ಸಂಸ್ಥೆ, ರಕ್ಷಣಾ ಪಡೆ ವೈದ್ಯಕೀಯ ಸಿಬ್ಬಂದಿ ವರ್ಗದವರು ಮಾತ್ರವೇ ಉಪಯೋಗಿಸಲು ಅವಕಾಶವಿದೆ ಎಂದರು. ನರ್ಸಿಂಗ್ ಹೋಂ, ಆಂಬ್ಯುಲೆನ್ಸ್, ಔಷಧಿ ವ್ಯಾಪಾರಿಗಳು, ಲ್ಯಾಬೊರೇಟರಿ, ವೈದ್ಯರು ಹೀಗೆ ಇನ್ನೂ ಅನೇಕ ಸಂಘ ಸಂಸ್ಥೆಗಳು ಈ ಚಿಹ್ನೆಯನ್ನು ಉಪಯೋಗಿಸುತ್ತಿದ್ದು, ಈ ಬಗ್ಗೆ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲೂ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ ಎಂದು ಹೇಳಿದರು.

ಸಂಸ್ಥೆಯ ಜಿಲ್ಲಾ ಶಾಖಾ ಸಮಿತಿಯಿಂದ ಇತರ ಸಂಘ ಸಂಸ್ಥೆಗಳ ಸಹಯೋಗದಲ್ಲಿ ಇಂದಿನಿಂದ ರೆಡ್ ಕ್ರಾಸ್ ಚಿಹ್ನೆ ದುರ್ಬಳಕೆ ಕುರಿತ ವಿಚಾರ ಸಂಕಿರಣ ಹಾಗೂ ಸ್ವಯಂ ಸೇವಕರಿಗೆ ಒಂದು ದಿನದ ತರಬೇತಿ ಹಮ್ಮಿಕೊಳ್ಳಲಾಗಿದೆ ಎಂದರು. ಜಿಲ್ಲಾ ಉಪಾಧ್ಯಕ್ಷ ಮೀರಾಶಿವಲಿಂಗಯ್ಯ, ಡಾ. ಚಂದ್ರಶೇಖರ್, ಎನ್.ಕೆ. ಸಿಂಗ್, ಎನ್.ಟಿ. ನಾರಾಯಣ, ಬಿ. ಲೋಕೇಶ್ ಇತರರು ಉಪಸ್ಥಿತರಿದ್ದರು.

14-12-2008 ಸಂಯುಕ್ತ ಕರ್ನಾಟಕ

## ರೆಡ್‌ಕ್ರಾಸ್ ಲಾಂಛನ ದುರ್ಬಳಕೆ ತಡೆಗೆ ಜಾಗೃತಿ

[illegible]

ಪ್ರಜಾವಾಣಿ
ಭಾನುವಾರ
14ನೇ ಡಿಸೆಂಬರ್ 2008

# 'ರೆಡ್‌ಕ್ರಾಸ್ ವೈದ್ಯಕೀಯ ಸೇವೆಯಿಂದ ಜನರಿಗೆ ಹತ್ತಿರ'

ಪ್ರಜಾವಾಣಿ ವಾರ್ತೆ

ಮಂಡ್ಯ: ವೈದ್ಯಕೀಯ ಸೇವೆ ನೀಡುವುದು ಸೇರಿದಂತೆ ಹಲವಾರು ಕ್ಷೇತ್ರಗಳಲ್ಲಿ ರೆಡ್‌ಕ್ರಾಸ್ ಸಂಸ್ಥೆ ತನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು ಜನರಿಗೆ ಹತ್ತಿರವಾಗಿದೆ ಎಂದು ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆಯ ಉಪ ಸಭಾಧ್ಯಕ್ಷ ವೂಡೇ ಪಿ.ಕೃಷ್ಣ ಹೇಳಿದರು.

ಶನಿವಾರ ನಗರದ ಎಸ್.ಬಿ. ಸಮುದಾಯ ಭವನದಲ್ಲಿ ನಡೆದ 'ಸ್ವಯಂ ಸೇವಕರಿಗೆ ತರಬೇತಿ ಹಾಗೂ' ರೆಡ್‌ಕ್ರಾಸ್ ಚಿಹ್ನೆ ಬಳಸುವ ಬಗ್ಗೆ ಜಾಗೃತಿ' ಕಾರ್ಯಾಗಾರವನ್ನು ಉದ್ಘಾಟಿಸಿ ಅವರು ಮಾತನಾಡುತ್ತಿದ್ದರು.

ರೆಡ್‌ಕ್ರಾಸ್ ಸ್ವಯಂ ಸೇವಾ ಸಂಸ್ಥೆಯಾಗಿದ್ದು, ಮಾನವೀಯ ಕೆಲಸಗಳನ್ನು ಶ್ರದ್ಧೆಯಿಂದ ನಿರ್ವಹಿಸುತ್ತಿದೆ. ತನ್ನ ಸೇವಾ ತತ್ಪರತೆಯಿಂದ ನಾಲ್ಕು ನೊಬೆಲ್ ಪ್ರಶಸ್ತಿ ಪಡೆದ ಏಕೈಕ ಅಂತರಾಷ್ಟ್ರೀಯ ಸ್ವಯಂ ಸೇವಾ ಸಂಸ್ಥೆ ಎಂದು ಬಣ್ಣಿಸಿದರು.




ರೆಡ್‌ಕ್ರಾಸ್ ಸಂಸ್ಥೆ ಶನಿವಾರ ನಗರದ ಎಸ್.ಬಿ.ಸಮುದಾಯ ಭವನದಲ್ಲಿ ಏರ್ಪಡಿಸಿದ್ದ, 'ಸ್ವಯಂ ಸೇವಕರಿಗೆ ತರಬೇತಿ' ಕಾರ್ಯಾಗಾರವನ್ನು ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಉಪ ಸಭಾಧ್ಯಕ್ಷ ವೂಡೇ ಪಿ.ಕೃಷ್ಣ ಉದ್ಘಾಟಿಸಿದರು.

ಎಲ್ಲಾ ವಾಣಿಜ್ಯ, ವಿದ್ಯಾ ಮತ್ತು ಸಂಘ ಸಂಸ್ಥೆಗಳು ಪ್ರತ್ಯೇಕ ಚಿಹ್ನೆ ಹೊಂದಿರುವಂತೆ ರೆಡ್‌ಕ್ರಾಸ್ ಸಂಸ್ಥೆಯು ಹೊಂದಿದೆ. ಆದರೆ ಸಮರ್ಪಕವಾಗಿ ಜಾರಿಯಾಗಿಲ್ಲ ಎಂದರು.

ಇದರ ಸಮರ್ಪಕ ಅನುಷ್ಠಾನಕ್ಕೆ ಕೇಂದ್ರ ಸರ್ಕಾರ ಪ್ರಾಧಿಕಾರವನ್ನು ರಚಿಸಬೇಕೆಂದು ಆಗ್ರಹಿಸಿದ ಅವರು, ಸಂಸ್ಥೆಯ ಲಾಂಛನದ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸುವ ಕೆಲಸ ಆಗಬೇಕಿದೆ ಎಂದು ಹೇಳಿದರು.

ಸಮಾರಂಭದಲ್ಲಿ ರೆಡ್ ಕ್ರಾಸ್ ಸಂಸ್ಥೆ ನಿರ್ದೇಶಕ ಎನ್.ಕೆ.ಸಿಂಗ್, ಜಿಲ್ಲಾ ಔಷಧ ನಿಯಂತ್ರಣಾಧಿಕಾರಿ ನಾಗರಾಜು, ರೆಡ್‌ಕ್ರಾಸ್ ಸಂಸ್ಥೆ ಜಿಲ್ಲಾ ಉಪಾಧ್ಯಕ್ಷೆ ಮೀರಾಶಿವಲಿಂಗಯ್ಯ, ಜಿಲ್ಲಾ ಆಸ್ಪತ್ರೆ ವೈದ್ಯಕೀಯ ಅಧೀಕ್ಷಕ ಡಾ. ಎನ್. ರಾಮಲಿಂಗೇಗೌಡ, ರೆಡ್‌ಕ್ರಾಸ್ ಸಂಸ್ಥೆ ರಾಜ್ಯ ಪ್ರಧಾನ ಕಾರ್ಯದರ್ಶಿ ಡಾ.ಎನ್.ಜಿ.ನಾರಾಯಣ ಮತ್ತಿತರರು ಉಪಸ್ಥಿತರಿದ್ದರು.




ಮಾಧವನಗರ ಲಯನ್ಸ್ ಸಂಸ್ಥೆ ಹಾಗೂ ವೊಕ್ಹಾರ್ಡ್ ಆಸ್ಪತ್ರೆ ಹಮ್ಮಿಕೊಂಡಿದ್ದ ಹೃದಯ ತಪಾಸಣೆ ಶಿಬಿರವನ್ನು ಶಾಸಕ ದಿನೇಶ್ ಗುಂಡೂರಾವ್ ಉದ್ಘಾಟಿಸಿದರು. ಲಯನ್ಸ್ ಸಂಸ್ಥೆಯ ಕೆ. ವಂಶೀಧರ್ ಬಾಬಜು, ವೂಡೇ ಪಿ.ಕೃಷ್ಣ, ರಾಜು ಚಂದ್ರಶೇಖರ್, ಲಯನ್ಸ್ ಅಧ್ಯಕ್ಷ ಜಿ. ಕಮಲನಾಥನ್ ಭಾಗವಹಿಸಿದ್ದರು.

ಪ್ರಜಾವಾಣಿ
ಶನಿವಾರ
13ನೇ ಡಿಸೆಂಬರ್ 2008

## ನಗರದಲ್ಲಿ ಇಂದು

**ಭಾರತೀಯ ರೆಡ್ ಕ್ರಾಸ್ ಸಂಸ್ಥೆ:** ಎಸ್‌ಬಿ ಸಮುದಾಯ ಭವನ, ತಾವರಗೆರೆ. ಸ್ವಯಂ ಸೇವಕರಿಗೆ ತರಬೇತಿ ಶಿಬಿರ. ಉದ್ಘಾಟನೆ -ರೆಡ್‌ಕ್ರಾಸ್ ಸಂಸ್ಥೆ ರಾಜ್ಯ ಶಾಖೆ ಉಪಾಧ್ಯಕ್ಷ ವೂಡೇ ಪಿ.ಕೃಷ್ಣ. ಅತಿಥಿಗಳು -ರೆಡ್ ಕ್ರಾಸ್ ಸಂಸ್ಥೆ ನಿರ್ದೇಶಕ ಎಸ್.ಕೆ.ಸಿಂಗ್, ಜಿಲ್ಲಾ ಔಷಧ ನಿಯಂತ್ರಣಾಧಿಕಾರಿ ನಾಗರಾಜು. ಅಧ್ಯಕ್ಷತೆ -ರೆಡ್‌ಕ್ರಾಸ್ ಸಂಸ್ಥೆ ಜಿಲ್ಲಾ ಉಪಾಧ್ಯಕ್ಷ ಮೀರಾಶಿವಲಿಂಗಯ್ಯ. ಬೆಳಿಗ್ಗೆ 9.45.

ಶನಿವಾರ ಡಿಸೆಂಬರ್ 13, 2008 ಪುಟ - 2 ಬೆಲೆ - 99 ಪೈಸೆ ಸಂಜೆ ದಿನಪತ್ರಿಕೆ

# ರೆಡ್‌ಕ್ರಾಸ್ ಚಿಹ್ನೆ ದುರ್ಬಳಕೆ ಕುರಿತು ಜನಜಾಗೃತಿ

ಮಂಡ್ಯ: ರೆಡ್‌ಕ್ರಾಸ್ ಚಿಹ್ನೆ ದುರ್ಬಳಕೆ ಕುರಿತು ಇಂದಿನಿಂದ ಐದು ದಿನಗಳವರೆಗೆ ಜನಜಾಗೃತಿ ಕಾರ್ಯಾಗಾರವನ್ನು ಹಮ್ಮಿಕೊಳ್ಳಲಾಗಿದೆ ಎಂದು ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ರಾಜ್ಯ ಶಾಖೆ ಉಪಾಸಭಾಧ್ಯಕ್ಷ ವೂಡೆ ಪಿ.ಕೃಷ್ಣ ಸುದ್ದಿಗೋಷ್ಠಿಯಲ್ಲಿ ತಿಳಿಸಿದರು.

ಇಂದಿನಿಂದ ಆರಂಭವಾಗುತ್ತಿರುವ ಕಾರ್ಯಾಗಾರದಲ್ಲಿ ಸ್ವಯಂ ಸೇವಕರಿಗೆ ತರಬೇತಿ ನೀಡುವ ಮೂಲಕ ಜಾಗೃತಿ ಮೂಡಿಸಲಾಗುವುದು ಎಂದರು.

ವೈದ್ಯಕೀಯ ಸೇವೆ ಸೇರಿದಂತೆ




ಇನ್ನಿತರ ಕ್ಷೇತ್ರಗಳಲ್ಲಿ ರೆಡ್‌ಕ್ರಾಸ್ ಚಿಹ್ನೆಯನ್ನು ದುರ್ಬಳಕೆ ಮಾಡಿಕೊಳ್ಳಲಾಗುತ್ತಿದೆ. ಈ ಬಗ್ಗೆ ಕ್ರಮ ತೆಗೆದುಕೊಳ್ಳುವಂತೆ ಕಾಯ್ದೆ ಜಾರಿಯಾಗಿದ್ದರೂ ಇನ್ನೂ ಅನುಷ್ಠಾನಕ್ಕೆ ಬಂದಿಲ್ಲ. ಆದ್ದರಿಂದ ಈ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ ಎಂದು ತಿಳಿಸಿದರು.

ಕಾರ್ಯಾಗಾರದಲ್ಲಿ ವಿವಿಧ ಇಲಾಖೆಗಳ ಮುಖ್ಯಸ್ಥರು, ಭಾರತೀಯ ಸೇವಾದಳದ ಸ್ವಯಂಸೇವಕರು, ಔಷಧಿ ವ್ಯಾಪಾರಿಗಳು, ವಿವಿಧ ಸಂಘಟನೆಗಳ ಸ್ವಯಂ ಸೇವಕರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ತಂಡಗಳು ಭಾಗವಹಿಸಲಿವೆ ಎಂದು ಹೇಳಿದರು.

ಸುದ್ದಿಗೋಷ್ಠಿಯಲ್ಲಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಉಪಾಧ್ಯಕ್ಷೆ ಮೀರಾ ಶಿವಲಿಂಗಯ್ಯ, ಗೌರವ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ರಾಷ್ಟ್ರೀಯ ಕಾರ್ಯಾಲಯದ ನಿರ್ದೇಶಕ ಎನ್.ಕೆ.ಸಿಂಗ್, ಪ್ರಧಾನ ಕಾರ್ಯದರ್ಶಿ ಡಾ.ಎನ್.ಜಿ. ನಾರಾಯಣ್ ಹಾಜರಿದ್ದರು.

ಶನಿವಾರ ಡಿಸೆಂಬರ್ 13, 2008 ಸಂಜೆ ದಿನ ಪತ್ರಿಕೆ ಪುಟ-2

# ರೆಡ್‌ಕ್ರಾಸ್ ಚಿಹ್ನೆ ದುರುಪಯೋಗ: ಆರೋಪ

ಕನ್ನಂಬಾಡಿವಾರ್ತೆ

ಮಂಡ್ಯ, ಡಿ.13- ರೆಡ್‌ಕ್ರಾಸ್ ಸಂಸ್ಥೆಯ ಚಿಹ್ನೆಯನ್ನು ಕೆಲವು ಮಂದಿ ದುರುಪಯೋಗ ಪಡಿಸಿಕೊಳ್ಳುತ್ತಿದ್ದಾರೆ ಎಂದು ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಉಪ ಸಭಾಧ್ಯಕ್ಷ ವೊಡೇ ಪಿ.ಕೃಷ್ಣ ಆರೋಪಿಸಿದ್ದಾರೆ.

ಸಂಸ್ಥೆಯ ಚಿಹ್ನೆಯು 1864ರ ಜಿನಿವಾ ಒಪ್ಪಂದದಂತೆ ಜಾರಿಗೆ ಬಂದಿದ್ದು, ಈ ಚಿಹ್ನೆಯನ್ನು ರೆಡ್‌ಕ್ರಾಸ್ ಸಂಸ್ಥೆಯ ರಕ್ಷಣಾ ಪಡೆಯ ವೈದ್ಯಕೀಯ ಸಿಬ್ಬಂದಿ ವರ್ಗದವರು ಸದಸ್ಯರು ಮಾತ್ರ ಉಪಯೋಗಿಸಬೇಕು ಎಂದು ಶನಿವಾರ ಪತ್ರಿಕಾಗೋಷ್ಠಿಯಲ್ಲಿ ತಿಳಿಸಿದರು.

ಔಷಧಿ ವ್ಯಾಪಾರಿಗಳು, ಆಸ್ಪತ್ರೆಗಳು, ನರ್ಸಿಂಗ್ ಹೋಂ, ವೈದ್ಯರು, ಅಂಬುಲೆನ್ಸ್, ಲ್ಯಾಬೋರೇಟರಿ ಅಥವಾ ಬೇರಾವ ವ್ಯಕ್ತಿಗಳು ಚಿಹ್ನೆಯನ್ನು ಉಪಯೋಗಿಸುವ ಹಕ್ಕಿಲ್ಲ. ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯು ಐಸಿಆರ್‌ಸಿ ಸಹಯೋಗದೊಂದಿಗೆ ಎಲ್ಲ ರಾಜ್ಯಗಳಲ್ಲಿ ಹಾಗೂ ಜಿಲ್ಲೆಗಳಲ್ಲಿ ರೆಡ್‌ಕ್ರಾಸ್ ಚಿಹ್ನೆ ದುರ್ಬಳಕೆಯ ಬಗ್ಗೆ ಜಾಗೃತಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದ ಎಂದರು.



ರೆಡ್‌ಕ್ರಾಸ್ ಚಿಹ್ನೆ ದುರ್ಬಳಕೆಯ ಬಗ್ಗೆ ಜಾಗೃತಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ

ಭಾರತೀಯ ರೆಡ್‌ಕ್ರಾಸ್, ಮಂಡ್ಯ ಜಿಲ್ಲಾ ಶಾಖೆಯ ಅಂತರಾಷ್ಟ್ರೀಯ ರೆಡ್‌ಕ್ರಾಸ್ ಸಮಿತಿ ಇವರ ಸಹಯೋಗದಲ್ಲಿ ಇಂದಿನಿಂದ ರೆಡ್‌ಕ್ರಾಸ್ ಚಿಹ್ನೆಯ ದುರ್ಬಳಕೆ ಕುರಿತು ವಿಚಾರ ಸಂಕಿರಣ ಹಾಗೂ ಸ್ವಯಂ ಸೇವಕರಿಗೆ ಒಂದು ದಿನದ ತರಬೇತಿ ಕಾರ್ಯಕ್ರಮ ಐದು ದಿನಗಳ ಕಾಲ ನಡೆಯಲಿದೆ ಎಂದು ಹೇಳಿದರು.

ವಿಚಾರ ಸಂಕಿರಣದಲ್ಲಿ ವಿವಿಧ ಇಲಾಖೆಗಳ ಮುಖ್ಯಸ್ಥರು, ಭಾರತ ಸೇವಾದಳದ ಸ್ವಯಂ ಸೇವಕರು, ಔಷಧಿ ವ್ಯಾಪಾರಿಗಳು, ವಿವಿಧ ಸಂಘಟನೆಗಳ ಸ್ವಯಂ ಸೇವಕರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ತಂಡದವರು ಭಾಗವಹಿಸಲಿದ್ದಾರೆ ಎಂದು ತಿಳಿಸಿದರು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಸಮಾಜದ ವಿವಿಧ ಸ್ತರಗಳಲ್ಲಿನ ನೊಂದವರ ಹಾಗೂ ಸಹಾಯವಾಣಿಯಾಗಿ ಕಾರ್ಯ ನಿರ್ವಹಿಸುತ್ತಿದೆ. ವಿವಿಧ ಸಂಘ ಸಂಸ್ಥೆಗಳಡಿ ಹತ್ತಾರು ಜನಪರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ಜನಮಾನಸದಲ್ಲಿ ಸಂಸ್ಥೆ ಮೂಡಿದೆ ಎಂದರು.

ಪತ್ರಿಕಾಗೋಷ್ಠಿಯಲ್ಲಿ ಉಪಾಧ್ಯಕ್ಷ ಮೀರಾ ಶಿವಲಿಂಗಯ್ಯ, ಎನ್.ಕೆ.ಸಿಂಗ್, ರಾಜುಚಂದ್ರಶೇಖರ್, ಎನ್.ಜಿ.ನಾರಾಯಣ್, ಬಿ.ಲೋಕೇಶ್ ಸೇರಿದಂತೆ ಇತರರು ಹಾಜರಿದ್ದರು.

## ಪುರಸಭೆ ಉಪಾಧ್ಯಕ್ಷ ಬಂಧನ

ಕನ್ನಂಬಾಡಿವಾರ್ತೆ

ಕೆ.ಆರ್.ಪೇಟೆ, ಡಿ.13- ಮೋಸ ಮತ್ತು ವಂಚನೆ ಪ್ರಕರಣಕ್ಕೆ ಸಂಬಂಧಿಸಿದಂತೆ ಇಲ್ಲಿನ ಪುರಸಭೆ ಉಪಾಧ್ಯಕ್ಷ ಅಬ್ದುಲ್ ಘನಿಯನ್ನು ಪೊಲೀಸರು ಶನಿವಾರ ಬೆಳಗ್ಗೆ ಬಂಧಿಸಿದ್ದಾರೆ.

ಬೆಂಗಳೂರಿನ ಯಶವಂತಪುರದಿಂದ ಆಗಮಿಸಿದ್ದ ಸಿಸಿಬಿ ಪೊಲೀಸರ ತಂಡ ಘನಿಯನ್ನು ಅವರ ಮನೆಯಲ್ಲಿ ಬಂಧಿಸಿ ವಿಚಾರಣೆಗಾಗಿ ಬೆಂಗಳೂರಿಗೆ ಕರೆದೊಯ್ದಿದ್ದಾರೆ.

ಕಳೆದ ಮೂರು ತಿಂಗಳ ಹಿಂದೆ ಅಬ್ದುಲ್ ಘನಿ ಶ್ರೀಧರ್ ಎಂಬುವರಿಂದ ಒಂದು ಸಾವಿರ ಮುಂಗಡ ನೀಡಿ ಟಿಪ್ಪರ್ ಲಾರಿಯನ್ನು ಖರೀದಿಸಿದ್ದರು. ಉಳಿದ ಹಣವನ್ನು ಒಂದು ತಿಂಗಳಲ್ಲಿ ನೀಡುವುದಾಗಿ ತಿಳಿಸಿ ಮೂರು ತಿಂಗಳು ಕಳೆದರೂ ನೀಡದೆ ಸತಾಯಿಸುತ್ತಿದ್ದರು.

ಇದ್ದಕ್ಕಿದ್ದಂತೆ ಲಾರಿಯನ್ನು ಗುಜರಿಯೊಂದಕ್ಕೆ ಮಾರಾಟ ಮಾಡಿ ಹಣ ಪಡೆದ ಘನಿ, ಶ್ರೀಧರ್‌ಗೆ ಮೋಸ ಮಾಡಲು ಯತ್ನಿಸಿದ್ದರು. ಶ್ರೀಧರ್ ಯಶವಂತಪುರ ಪೊಲೀಸ್ ಠಾಣೆಗೆ ದೂರು ನೀಡಿದ್ದ ಹಿನ್ನೆಲೆಯಲ್ಲಿ ಪೊಲೀಸರು ಘನಿಯನ್ನು ಬಂಧಿಸಿದ್ದಾರೆ.

ಬೆಂಗಳೂರು ವಿಜಯ | ಬುಧವಾರ, 10 ಡಿಸೆಂಬರ್ 2008




ರಾಜ್ಯ ರೆಡ್‌ಕ್ರಾಸ್ ಸಂಸ್ಥೆಯು ಬಿಹಾರ ಪ್ರವಾಹ ಸಂತ್ರಸ್ತರಿಗೆ ಪರಿಹಾರ ಸಾಮಗ್ರಿಗಳ ರವಾನೆಗೆ ಸಂಸ್ಥೆಯ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ ಚಾಲನೆ ನೀಡಿದರು. ಡಾ. ಎಸ್.ಜಿ. ನಾರಾಯಣ, ಎ.ಆರ್. ಶ್ರೀನಿವಾಸಯ್ಯ, ಟಿ. ಪ್ರಭಾಕರ್, ಮೀರಾ ಶಿವಲಿಂಗಯ್ಯ, ನಳಿನಾಕ್ಷಿ ಸಣ್ಣಪ್ಪ ಪಿ. ಕೃಷ್ಣಮೂರ್ತಿ ಉಪಸ್ಥಿತರಿದ್ದರು.

ಪ್ರಜಾವಾಣಿ ಮಂಗಳವಾರ 9ನೇ ಡಿಸೆಂಬರ್ 2008



ಲಯನ್ಸ್ ಕ್ಲಬ್ ಆಫ್ ಬೆಂಗಳೂರು ಮಾಧವನಗರ ಹಾಗೂ ವೊಕಾರ್ಡ್ ಆಸ್ಪತ್ರೆ ವತಿಯಿಂದ ಬೆಂಗಳೂರಿನಲ್ಲಿ ಸೋಮವಾರ ಉಚಿತ ಹೃದಯ ತಪಾಸಣಾ ಶಿಬಿರ ಏರ್ಪಡಿಸಲಾಗಿತ್ತು. ಅಂತರರಾಷ್ಟ್ರೀಯ ಲಯನ್ಸ್ ಸಂಸ್ಥೆಯ ಜಿಲ್ಲಾ ಗೌರ್ನರ್ ಕೆ. ವಂಶೀಧರ್ ಬಾಬು, ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ವೊಡೆ ಪಿ. ಕೃಷ್ಣ, ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಲಯನ್ಸ್ ಅಧ್ಯಕ್ಷ ಜಿ. ಕಮಲನಾಥನ್ ಮತ್ತಿತರರು ಉಪಸ್ಥಿತರಿದ್ದರು.

ಸಂಜೆವಾಣಿ ಮಂಗಳವಾರ 9 ಡಿಸೆಂಬರ್ 2008




ಮಾಧವನಗರ ಲಯನ್ಸ್ ಸಂಸ್ಥೆ ಹಾಗೂ ವೊಕ್‌ಹಾರ್ಡ್ ಆಸ್ಪತ್ರೆ ಸಂಯೋಗದೊಂದಿಗೆ ನಡೆದ ಉಚಿತ ಹೃದಯ ತಪಾಸಣಾ ಶಿಬಿರವನ್ನು ಶಾಸಕ ದಿನೇಶ್ ಗುಂಡೂರಾವ್ ಉದ್ಘಾಟಿಸಿದರು. ಇದೇ ಸಂದರ್ಭದಲ್ಲಿ ಅಂತಾರಾಷ್ಟ್ರೀಯ ಲಯನ್ಸ್ ಸಂಸ್ಥೆ ಜಿಲ್ಲಾ ಗವರ್ನರ್ ಕೆ. ವಂಶೀಧರ್ ಬಾಬು, ರಾಜ್ಯ ರೆಡ್‌ಕ್ರಾಸ್ ಉಪಾಧ್ಯಕ್ಷ ವೂದೇ ಪಿ. ಕೃಷ್ಣ, ಕೋಶಾಧ್ಯಕ್ಷ ರಾಜುಚಂದ್ರಶೇಖರ್, ಲಯನ್ಸ್ ಅಧ್ಯಕ್ಷ ಜಿ. ಕಮಲನಾಥನ್ ಹಾಗೂ ಇತರರು ಉಪಸ್ಥಿತರಿದ್ದರು.

ಪ್ರಜಾವಾಣಿ ಮಂಗಳವಾರ 9ನೇ ಡಿಸೆಂಬರ್ 2008



ಲಯನ್ಸ್ ಕ್ಲಬ್ ಆಫ್ ಬೆಂಗಳೂರು ಮಾಧವನಗರ ಹಾಗೂ ವೋಕಾರ್ಡ್ ಆಸ್ಪತ್ರೆ ವತಿಯಿಂದ ಬೆಂಗಳೂರಿನಲ್ಲಿ ಸೋಮವಾರ ಉಚಿತ ಹೃದಯ ತಪಾಸಣಾ ಶಿಬಿರ ಏರ್ಪಡಿಸಲಾಗಿತ್ತು. ಅಂತರರಾಷ್ಟ್ರೀಯ ಲಯನ್ಸ್ ಸಂಸ್ಥೆಯ ಜಿಲ್ಲಾ ಗೌರ್ನರ್ ಕೆ. ವಂಶೀಧರ್ ಬಾಬು, ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ವೊಡೆ ಪಿ. ಕೃಷ್ಣ, ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಲಯನ್ಸ್ ಅಧ್ಯಕ್ಷ ಜಿ. ಕಮಲನಾಥನ್ ಮತ್ತಿತರರು ಉಪಸ್ಥಿತರಿದ್ದರು.



ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಹಾಗೂ ಶೇಷಾದ್ರಿಪುರ ಪದವಿಪೂರ್ವ ಕಾಲೇಜು ಏರ್ಪಡಿಸಿದ್ದ ಜನ ಜಾಗೃತಿ ಜಾಥಾಕ್ಕೆ ಇತಿಹಾಸ ತಜ್ಞ ಡಾ. ಸೂರ್ಯನಾಥ ಕಾಮತ್ ಚಾಲನೆ ನೀಡಿದರು. ರಾಜ್ಯ ರೆಡ್‌ಕ್ರಾಸ್ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ, ಗೌರವ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ನೇತ್ರ ತಜ್ಞ ಡಾ. ಅಪ್ಪಾಜಿಗೌಡ, ಪ್ರಿನ್ಸಿಪಾಲ್ ಪ್ರೊ. ಎಂ.ಆರ್. ಶ್ರೀನಿವಾಸ್ ಪಾಲ್ಗೊಂಡಿದ್ದರು.

ಕನ್ನಡಪ್ರಭ, ಬುಧವಾರ, 3 ಡಿಸೆಂಬರ್ 2008




## ಜಾಗೃತಿ ಜಾಥಾ

ಏಡ್ಸ್ ದಿನ ಅಂಗವಾಗಿ ಭಾರತೀಯ ರೆಡ್‌ಕ್ರಾಸ್ ಹಾಗೂ ಶೇಷಾದ್ರಿಪುರ ಕಾಲೇಜು ಏರ್ಪಡಿಸಿದ್ದ ಜನ ಜಾಗೃತಿ ಜಾಥಾಗೆ ಸೂರ್ಯನಾಥ ಕಾಮತ್ ಚಾಲನೆ ನೀಡಿದರು. ವೂಡೆ ಕೃಷ್ಣ, ಅಪ್ಪಾಜಿ ಗೌಡ, ರಾಜು ಚಂದ್ರಶೇಖರ್, ಎಂ.ಆರ್. ಶ್ರೀನಿವಾಸ್ ಇದ್ದರು.

# ಮುಂಬೈ ಹುತಾತ್ಮರಿಗೆ ಭಾವಪೂರ್ಣ ಅಕ್ಷರ ಕಂಬನಿ

ಬೆಂಗಳೂರು, ಡಿ.1: ಭಯೋತ್ಪಾದಕರ ಪಾಶವೀ ಹಿಡಿತದಿಂದ ವಾಣಿಜ್ಯನಗರಿ ಮುಂಬೈನ್ನು ಬಿಡಿಸಲು ಹೋಗಿ ಪ್ರಾಣತೆತ್ತ ವೀರಯೋಧರಿಗೆ ಭಾವಪೂರ್ಣವಾಗಿ ಅಕ್ಷರ ಕಂಬನಿ ಮಿಡಿಯುವ ...ಪೂರ್ಣ ಕಾರ್ಯಕ್ರಮ ಇಂದು ನಡೆಯಿತು.

ವಿಶ್ವ ಕನ್ನಡಿಗರ ವೇದಿಕೆ ಗಾಂಧಿಭವನದಲ್ಲಿ ಆಯೋಜಿಸಿದ್ದ ಶ್ರದ್ಧಾಂಜಲಿ ಸಭೆಯಲ್ಲಿ ಸಂದೀಪ್ ಉನ್ನಿಕೃಷ್ಣನ್, ಹೇಮಂತ್ ಕರ್ಕರಾ, ವಿಜಯಸಾಲಸ್ಕರ್ ಹಾಗೂ ಅಶೋಕ ಕಾಮ್ಟೆ ಅವರ ಭಾವಚಿತ್ರಗಳಿಗೆ ಪುಷ್ಪ ನಮನ ಸಲ್ಲಿಸಲಾಯಿತು. ನಂತರ ಅಕ್ಷರ ಕಂಬನಿ ಮಿಡಿದ ಗಣ್ಯರೆಲ್ಲರೂ ದೇಶದ ಸ್ವಾತಂತ್ರ್ಯ ರಕ್ಷಣೆಗಾಗಿ ತಮ್ಮ ಅಮೂಲ್ಯ ಪ್ರಾಣತೆತ್ತ ವೀರಪುತ್ರರ ತ್ಯಾಗವನ್ನು ಕೊಂಡಾಡಿದರು. ಜತೆಗೆ ರಾಜಕಾರಣಿಗಳ ಸ್ವಾರ್ಥ ವರ್ತನೆಯನ್ನೂ ಖಂಡಿಸಿದರು.

ಹಿರಿಯ ಗಾಂಧಿವಾದಿ, ಮಾಜಿ ಸಚಿವ ಎ.ಎಸ್. ಕೃಷ್ಣ ಅಯ್ಯರ್, ದೇಶದ ಸ್ವಾತಂತ್ರ್ಯಕ್ಕಾಗಿ ವೀರಮರಣ ಹೊಂದಿದವರಿಗೆ ಶ್ರದ್ಧಾಂಜಲಿ ಸಲ್ಲಿಸುವುದೆಂದರೆ ನಾವೂ ಕೂಡ ಯಾವುದೇ ತ್ಯಾಗಕ್ಕೂ ಸಿದ್ಧ ಎಂದು ಪ್ರತಿಜ್ಞೆ ಮಾಡುವುದೇ ಆಗಿದೆ. ಇಂತಹ ಘಟನೆ ಮರುಕಳಿಸದಂತೆ ಸರ್ವಪಕ್ಷಗಳು ಭಯೋತ್ಪಾದನೆ ವಿರುದ್ಧ ಒಮ್ಮತದಿಂದ ಹೋರಾಟ ರೂಪಿಸಬೇಕು ಎಂದರು.

ಬ್ರಿಟಿಶರ ಚಕ್ರಾಧಿಪತ್ಯವನ್ನು ಕೊನೆಗಾಣಿಸಲು ...ಹಿಂಸಾ ಮಾರ್ಗದ ಮೂಲಕವೇ ಹೋರಾಟ ಮಾಡಿ ...ಸ್ವಿಯಾದ ಭಾರತೀಯರು ವಿಶ್ವಕ್ಕೆ ಶಾಂತಿ ...ೋಧಿಸಿದವರು. ಇಂದೇ ಇಡೀ ವಿಶ್ವವೇ ಭಾರತಕ್ಕೆ ಶಾಂತಿ ಬೋಧಿಸುವ ಸ್ಥಿತಿ ತಲುಪಿರುವುದು ದುರ್ದೈವ. ಜಾತಿ, ಧರ್ಮ, ಪಕ್ಷ ಬೇಧ ತೊರೆದು ಎಲ್ಲರೂ ಇದರ ವಿರುದ್ಧ ಕಟಿಬದ್ಧರಾಗಿ ಹೋರಾಟ ಮಾಡಬೇಕಿದೆ ಎಂದರು.

ಮಾಜಿ ಸಚಿವ ಪಿ.ಜಿ.ಆರ್. ಸಿಂಧ್ಯಾ, ಮೃತ ಸಂದೀಪರ ತಂದೆ ಉನ್ನಿಕೃಷ್ಣನ್ ಅವರು ರಾಜಕೀಯ ಮುಖಂಡರ ಬಗ್ಗೆ ಆಡಿರುವ ಮಾತುಗಳು ಎಲ್ಲರ ಕಣ್ಣು ತೆರೆಸುವಂತಿವೆ. ರಾಜಕಾರಣಿಗಳ ಬಗ್ಗೆ ಜನ ಸಾಮಾನ್ಯರಲ್ಲಿರುವ ಜುಗುಪ್ಸೆಯ ಭಾವನೆಗೆ ಅವರ ಮಾತುಗಳು ಪ್ರತೀಕ. ಅಂತಹ ಪ್ರಾಮಾಣಿಕರು, ನಿಸ್ವಾರ್ಥಿಗಳು ಇರುವುದರಿಂದ ದೇಶ ಇಷ್ಟು ನೆಮ್ಮದಿಯಿಂದ ಇದೆ. ಮುಂಬೈ ಘಟನೆಯನ್ನು ಪಕ್ಷದ ದೃಷ್ಟಿಯಿಂದ ನೋಡತಕ್ಕದ್ದಲ್ಲ. ಆಂತರಿಕ ಲೋಪ ಸರಿಪಡಿಸಿಕೊಂಡು ಎಲ್ಲರೂ ಒಗ್ಗೂಡಿ ಹೋರಾಡಬೇಕಿದೆ ಎಂದರು.

ನಿವೃತ್ತ ಪೊಲೀಸ್ ಅಧಿಕಾರಿ ಆರ್.ಡಿ. ಬರ್ಮನ್ ಮಾತನಾಡಿ, ಪಾಕಿಸ್ತಾನ ಭಯೋತ್ಪಾದನೆಯ ಕಾರ್ಖಾನೆಯಾಗಿದೆ. ಕರ್ನಾಟಕದ ಶೇ.75 ರಷ್ಟು ಕೋಮುಗಲಭೆಗಳು ರಾಜಕೀಯದಿಂದ ಪ್ರೇರೇಪಿತವಾದವು. ತಾತ್ಕಾಲಿಕ ಅಧಿಕಾರದ ಆಸೆಗಾಗಿ ರಾಜಕಾರಣಿಗಳು ಆಡುತ್ತಿರುವ ಆಟದಿಂದ ಇವು ನಡೆಯುತ್ತಿವೆ. ನಮ್ಮಲ್ಲಿ ಗುಪ್ತಚರ ಇಲಾಖೆಯಿದ್ದರೂ ಅದು ಕೇವಲ ರಾಜಕಾರಣದ ಮಾಹಿತಿ ಕಲೆ ಹಾಕುವಷ್ಟು ಮಾತ್ರ ಬಳಕೆಯಾಗುತ್ತಿದೆ. ಕ್ರಿಮಿನಲ್‌ಗಳ ಬಗ್ಗೆ, ವಿದೇಶಿ ವಲಸಿಗರ ಬಗ್ಗೆ ಯಾವುದೇ ಮಾಹಿತಿ ಕಲೆ ಹಾಕುವ ಗುಪ್ತಜಾಲ ನಮ್ಮಲ್ಲಿ ಇಲ್ಲ ಎಂದರು.

ವಿಶ್ರಾಂತ ಪ್ರಾಧ್ಯಾಪಕ ಏಜಾಸುದ್ದೀನ್ ಮಾತನಾಡಿ, ಸಾರೆ ಜಹಾಂಸೆ ಅಚ್ಛಾ ಗೀತೆಯಲ್ಲಿ ಕವಿ ಇಕ್ಬಾಲ್ ಅವರು, ಯಾವ ಧರ್ಮವೂ ಪರಸ್ಪರ ದ್ವೇಷ, ಅಸೂಯೆ ಬೋಧಿಸುವುದಿಲ್ಲ, ನಾವೆಲ್ಲ ಭಾರತೀಯರಾಗೋಣ ಎಂದು ಕರೆ ನೀಡಿದ್ದರು. ಇಂದು ಅದೇ ಆಗಬೇಕಾಗಿದೆ. ಭಯೋತ್ಪಾದನೆಗೆ ಧರ್ಮ, ಜಾತಿ, ಆತ್ಮ ಯಾವುದೂ ಇಲ್ಲ, ಎಲ್ಲರೂ ಸನ್ಮಾರ್ಗ ರೂಢಿಸಿಕೊಳ್ಳಬೇಕಾಗಿದೆ ಎಂದರು.

ಮಾಜಿ ಸಂಸದ ಸಿ. ನಾರಾಯಣಸ್ವಾಮಿ, ಶಾಸಕ ದಿನೇಶ್‌ಗುಂಡೂರಾವ್, ಹಿರಿಯ ಪತ್ರಕರ್ತ ರಾಜಾ ಶೈಲೇಶಚಂದ್ರ ಗುಪ್ತ, ಕಾಂಗ್ರೆಸ್ ಮುಖಂಡ ಬಿ. ಗೋಪಾಲ್, ವೂಡೆ ಪಿ. ಕೃಷ್ಣ, ಪ್ರೊ|ಕೆ.ಇ. ರಾಧಾಕೃಷ್ಣ ಮೊದಲಾದವರು ಮಾತನಾಡಿದರು.




ಮುಂಬೈನಲ್ಲಿ ಭಯೋತ್ಪಾದಕರೊಂದಿಗೆ ನಡೆದ ಕಾಳಗದಲ್ಲಿ ಹುತಾತ್ಮರಾದ ಭದ್ರತಾ ಸಿಬ್ಬಂದಿಗೆ ವಿಶ್ವ ಕನ್ನಡಿಗರ ವೇದಿಕೆ ವತಿಯಿಂದ ಏರ್ಪಡಿಸಿದ್ದ ಶ್ರದ್ಧಾಂಜಲಿ ಸಭೆಯಲ್ಲಿ ಮಾಜಿ ಸಚಿವರಾದ ಎ.ಎಸ್. ಕೃಷ್ಣ ಅಯ್ಯರ್, ಪಿ.ಜಿ.ಆರ್. ಸಿಂಧ್ಯ, ಮಾಜಿ ಸಂಸದ ಸಿ. ನಾರಾಯಣಸ್ವಾಮಿ, ಮಾಜಿ ಶಾಸಕ ಪಿ.ಎಸ್. ಪ್ರಕಾಶ್ ಪಾಲ್ಗೊಂಡಿದ್ದರು.

ಈ ಸಂಜೆ

ಸೋಮವಾರ, 1 ಡಿಸೆಂಬರ್ 2008



ವಿಶ್ವ ಏಡ್ಸ್ ದಿನಾಚರಣೆ ಅಂಗವಾಗಿ ಭಾರತೀಯ ರೆಡ್‌ಕ್ರಾಸ್ ಹಾಗೂ ಶೇಷಾದ್ರಿಪುರ ಪಿಯು ಕಾಲೇಜು ಏರ್ಪಡಿಸಿದ್ದ ಜನಜಾಗೃತಿ ಜಾಥಾದಲ್ಲಿ ಇತಿಹಾಸ ತಜ್ಞ ಡಾ. ಸೂರ್ಯನಾಥ ಕಾಮತ್, ಉಪಾಧ್ಯಕ್ಷ ವೂಡೇ ಪಿ.ಕೃಷ್ಣ, ನೇತ್ರತಜ್ಞ ಡಾ. ಅಪ್ಪಾಜಿಗೌಡ, ಗೌರವ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಪ್ರಾಂಶುಪಾಲ ಎಂ.ಆರ್.ಶ್ರೀನಿವಾಸ್ ಮತ್ತಿತರರು ಉಪಸ್ಥಿತರಿದ್ದರು.

# ಸೇವೆಯಲ್ಲೇ ಸಾರ್ಥಕತೆ ಕಾಣುವ ಡಬ್ಲ್ಯು.ಪಿ. ಕೃಷ್ಣ

ಸೀತಾಶ್ರೀ.ಎಸ್.

ವೃತ್ತಿ, ಜೀವನೋಪಾಯ ಹಾಗೂ ವೈಯಕ್ತಿಕ ಕಾರ್ಯಗಳಲ್ಲದೆ ಕಿಂಚಿತ್ತಾದರೂ ಸಮಾಜಕ್ಕೆ ಸೇವೆ ಸಲ್ಲಿಸಬೇಕು. ಆಗಲೇ ನಮ್ಮ ಬದುಕಿಗೊಂದು ಅರ್ಥ ಎನ್ನುತ್ತಾರೆ ಶೇಷಾದ್ರಿ ಪುರಂ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ಹಾಗೂ ಸಮಾಜ ಸೇವಕ ಡಬ್ಲ್ಯೂ. ಪಿ.ಕೃಷ್ಣ ಸೇವೆಗಾಗಿ ಬಾಳು ಎಂಬ ತತ್ವವನ್ನು ಅಳವಡಿಸಿಕೊಂಡಿರುವ ಕೃಷ್ಣ ಸಮಾಜಕ್ಕಾಗಿ ಸಲ್ಲಿಸುತ್ತಿರುವ ಸೇವೆಯನ್ನು ಗುರುತಿಸಿ ರಾಜ್ಯ ಸರ್ಕಾರ ಈ ಸಾಲಿನ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ.

**ಕುಟುಂಬದ ಹಿನ್ನೆಲೆ :** ಡಬ್ಲ್ಯು.ಪಿ. ಕೃಷ್ಣ ಸಮಾಜ ಸೇವೆಗಾಗಿ ಬದುಕನ್ನೇ ಅರ್ಪಿಸಿದ ಅಜ್ಜ ಹಾಗೂ ತಂದೆಯ ಹಾದಿಯನ್ನೇ ಹಿಡಿದಿದ್ದಾರೆ. ತಂದೆ ಸ್ವಾತಂತ್ರ್ಯ ಹೋರಾಟಗಾರ ಡಬ್ಲ್ಯು. ಎಚ್.ಪುಟ್ಟಯ್ಯ, 1942ರ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಪಾಲ್ಗೊಂಡಿದ್ದು ಕಷ್ಟದಲ್ಲಿರುವವರ ಏಳಿಗೆಗಾಗಿ ಶ್ರಮಿಸುತ್ತಿರುವ ಡಬ್ಲ್ಯೂ. ಸಂಸ್ಥೆಯ ಸಂಸ್ಥಾಪಕರು.

ಅಜ್ಜ ಡಬ್ಲ್ಯು.ಪಿ.ಹನುಮಂತಪ್ಪನವರು ಹಳೆ ಮೈಸೂರು ಸಂಸ್ಥಾನದ ಪ್ರಜಾ ಪ್ರತಿನಿಧಿ ಸಭೆಯ ಸದಸ್ಯರು ಹಾಗೂ ಬೆಂಗಳೂರಿನ ಮಹಾಪೌರರಾಗಿದ್ದರು. ಬ್ರಹ್ಮಸಮಾಜದ ಆಂದೋಲನದಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದ ಹನುಮಂತಪ್ಪ ಗಾಂಧಿ ತತ್ವಗಳಿಗೆ ಮಾರುಹೋಗಿದ್ದರು.



**ಜ್ಯಾಕ್ ಆಫ್ ಆಲ್ :** ಕೃಷ್ಣ, ಬೆಂಗಳೂರಿನಲ್ಲಿ ಹುಟ್ಟಿದವರಾದರೂ, ಪ್ರಾಥಮಿಕ ವಿದ್ಯಾಭ್ಯಾಸವನ್ನು ಮೈಸೂರಿನ ರಾಮಕೃಷ್ಣ ಆಶ್ರಮದಲ್ಲಿ ಮುಗಿಸಿದರು. ಮೆಕ್ಯಾನಿಕಲ್ ಇಂಜಿನಿಯರಿಂಗ್, ಇಂಡಸ್ಟ್ರಿಯಲ್ ಇಂಜಿನಿಯರ್, ನ್ಯಾಯಶಾಸ್ತ್ರ ಬಿಸಿನೆಸ್ ಅಡಿಮಿನಿಸ್ಟ್ರೇಷನ್ ವಿಷಯಗಳಲ್ಲಿ ಪದವಿ ಪಡೆದಿದ್ದಾರೆ.

1986 ರಿಂದ 1988 ರವರೆಗೆ ಬಿಎಂಎಸ್ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದರು. ಚಾರ್ಟರ್ಡ್ ಇಂಜಿನಿಯರ್, ಯಂತ್ರೋದ್ಯಮದ ಸರ್ಕಾರಿ ಮೌಲ್ಯ ಮಾಪಕರಾಗಿದ್ದು ಮೈಸೂರು ಸ್ಟೋನ್ ವೇರ್ ಪೈಪ್ಸ್ ಅಂಡ್ ಪಾಟರೀಸ್ ಕಂಪನಿಯ ನಿರ್ದೇಶಕರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ.

ಚಿಕ್ಕಂದಿನಲ್ಲೇ ಸಮಾಜ ಸೇವೆಯತ್ತ ಆಸಕ್ತಿ ಬೆಳಸಿಕೊಂಡ ಕೃಷ್ಣ ಭಾರತೀಯ ಮೌಲ್ಯ ಮಾಪಕರ ಸಂಸ್ಥೆಯ ಸಹ ಕಾರ್ಯದರ್ಶಿಯಾಗಿಯೂ ಮೆಚ್ಚುಗೆ ಗಳಿಸಿದ್ದಾರೆ. 1992ರಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿಗೆ ಕಾಲಿಟ್ಟ ಕೃಷ್ಣ ಸದ್ಯ ಪ್ರಧಾನ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುತ್ತಿದ್ದು, ಹಲವಾರು ಮಂದಿ ಯುವಕ- ಯುವತಿಯರಿಗೆ ಮಾದರಿಯಾಗಿದ್ದಾರೆ. ಇವರ ಶೈಕ್ಷಣಿಕ ಸಾಧನೆಗಳನ್ನು ಗಮನಿಸಿದ ಬೆಂಗಳೂರು ಮಹಾನಗರ ಪಾಲಿಕೆ 2002 ರಲ್ಲಿ ಕೆಂಪೇಗೌಡ ಪ್ರಶಸ್ತಿ ನೀಡಿ ಗೌರವಿಸಿತು.

**ಕಾರ್ಯಗಳಲ್ಲಿಯೂ ಸೈ :** ಮತ್ತೊಬ್ಬರ ಒಳಿತಿಗಾಗಿ ಬಾಳುವಲ್ಲಿ ಸಾರ್ಥಕತೆಯನ್ನು ಕಾಣುವ ಕೃಷ್ಣ ಹಲವಾರು ಸೇವಾ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿ ಜನರ ವಿಶ್ವಾಸ ಗಳಿಸಿದ್ದಾರೆ. ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ಖಜಾಂಚಿಯಾಗಿ, ಅಲಸೂರಿನಲ್ಲಿರುವ ವಿಕಲಾಂಗ ಯೋಧರ ರೆಡ್ ಕ್ರಾಸ್ ಹೋಮ್‌ನ ಅಭಿವೃದ್ಧಿ ಸಮಿತಿ ಸದಸ್ಯರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇದಲ್ಲದೆ, ಭಾರತ ಸೇವಾ ದಳದ ಸಮಿತಿ ಸದಸ್ಯರಾಗಿ ಮತ್ತು ಗಾಂಧಿ ಶಾಂತಿ ಪ್ರತಿಷ್ಠಾನದ ಖಜಾಂಚಿ ಯಾಗಿದ್ದಾರೆ. ಕೃಷ್ಣ ಅವರ ನಿರಂತರ ಸೇವೆಯನ್ನು ಮೆಚ್ಚಿದ ಶ್ರೀ ವಿವೇಕಾನಂದ ಕಲಾ ಕೇಂದ್ರ 2000 ನೇ ಸಾಲಿನಲ್ಲಿ ಸೇವಾಶ್ರೀ ಪ್ರಶಸ್ತಿ ನೀಡಿದೆ.

**ಸ್ಫೂರ್ತಿ :** ತಮ್ಮ ಇಷ್ಟೆಲ್ಲಾ ಸೇವಾ ಕಾರ್ಯಕ್ಕೆ ರಾಮಕೃಷ್ಣ ಆಶ್ರಮದಲ್ಲಿ ಸಿಕ್ಕಿದ ಮಾರ್ಗದರ್ಶನವೇ ಕಾರಣ ಎನ್ನುವ ಕೃಷ್ಣ, ಅಂದೇ ಸ್ವಾಮಿ ವಿವೇಕಾನಂದರ ಆದರ್ಶ ತತ್ವಗಳನ್ನು ಅಳವಡಿಸಿಕೊಂಡರಂತೆ. ಮತ್ತೊಬ್ಬರ ಒಳಿತಿಗಾಗಿ ಬಾಳುವವನು ಅವನಾಗಿರುತ್ತಾನೆ. ಉಳಿದವರು ಬದು ಕಿಯೂ ಸತ್ತಂತೆ ಎಂಬ ವಿವೇಕಾನಂದರ ದಾರಿಯನ್ನೇ ಆರಿಸಿಕೊಂಡಿದ್ದಾರೆ. ಆಶ್ರಮದಲ್ಲಿ ದೊರೆತ ಶಿಕ್ಷಣದ ಪ್ರತಿ ಬಿಂಬವೇ ನನ್ನ ಇಂದಿನ ಬದುಕು ಎಂದು ಕೃಷ್ಣ ಹೆಮ್ಮೆಯಿಂದ ಹೇಳುತ್ತಾರೆ.

ಪ್ರತಿಯೊಬ್ಬ ಯಶಸ್ವಿ ಪುರುಷನ ಹಿಂದೆ ಮಹಿಳೆಯ ಪಾತ್ರವಿರುತ್ತದೆ ಎನ್ನುವ ಮಾತು ಕೃಷ್ಣ ಅವರ ಜೀವನದಲ್ಲೂ ನೂರರಷ್ಟು ಸತ್ಯ. ತಾಯಿ ದೊಡ್ಡಮ್ಮಯ್ಯ ಕೃಷ್ಣರಿಗೆ ಬಹು ದೊಡ್ಡ ಸ್ಫೂರ್ತಿ.

ಈಗ ಪತ್ನಿ ಸವಿತಾ ಬೆನ್ನೆಲುಬಾಗಿ ನಿಂತಿದ್ದಾರೆ. ಈಕೆಯೂ ಕೂಡ ಸಮಾಜ ಸೇವೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಬಡ ಮಕ್ಕಳಿಗೆಂದೇ ಸ್ಥಾಪಿಸಲ್ಪಟ್ಟಿರುವ ಶಾರದಾ ವಿದ್ಯಾಪೀಠದಲ್ಲಿ ಉಪನ್ಯಾಸಕಿಯಾಗಿ ಮಕ್ಕಳಿಗೆ ವಿದ್ಯಾದಾನ ಮಾಡುತ್ತಿದ್ದಾರೆ.

ಬರೀ ಕೆಟ್ಟದ್ದೇ ಕಾಣ ಸಿಗುವ ಇಂದಿನ ಸಮಾಜದಲ್ಲಿ ಕೃಷ್ಣ ಅವರ ಸೇವೆ ಅನುಕರಣೀಯ.

ಅಂಗಳ
ಕನ್ನಡದ [illegible] ವಾರಪತ್ರಿಕೆ
ಸ್ಥಾಪಕರು: ಎಂ.ಸಿ.ವರ್ಗೀಸ್

ಪ್ರಧಾನ ಸಂಪಾದಕ: [illegible]
ವ್ಯವಸ್ಥಾಪಕ ಸಂಪಾದಕ: [illegible]
ಸಂಪಾದಕ: [illegible]
ವ್ಯವಸ್ಥಾಪಕ ನಿರ್ದೇಶಕ: [illegible]
ವಿನ್ಯಾಸ: [illegible]

ಪಿ.ಬಿ.ನಂ. 2317, ಮಾಗಡಿರಸ್ತೆ, ಬೆಂಗಳೂರು-560023
ದೂರವಾಣಿ-23159704, 23406923 ಫ್ಯಾಕ್ಸ್; 23159704,
Email: editom angala@yahoo.co.in

Member: ABC & INS
ಸಂಪುಟ-25 ತಾರೀಖು 29-10-2008 ಸಂಚಿಕೆ-44

ಒಳಪುಟಗಳಲ್ಲಿ...



**ಮುಖಪುಟ: ದೀಪಿಕಾ ಪಡುಕೋಣೆ**

ಬಾಲಿವುಡ್‌ನಲ್ಲಿ ಎತ್ತರಕ್ಕೆ ಬೆಳೆದ ಬೆಡಗಿ ಕನ್ನಡದ ದೀಪಿಕಾ ಪಡುಕೋಣೆ. ಹಿಂದಿಯಷ್ಟೇ ಅಲ್ಲ ಭಾರತದ ಇತರ ಪ್ರಾದೇಶಿಕ ಚಿತ್ರಗಳಲ್ಲೂ ಕಾಣಿಸಿಕೊಂಡಿದ್ದಾರೆ. ಖ್ಯಾತ ಕ್ರೀಡಾಪಟು ಪ್ರಕಾಶ್ ಪಡುಕೋಣೆಯ ಮಗಳಾದ ದೀಪಿಕಾ ಉಪೇಂದ್ರನ ಜತೆ 'ಐಶ್ವರ್ಯ' ಚಿತ್ರದಲ್ಲಿ ನಟಿಸುವ ಮೂಲಕ ಕನ್ನಡಕ್ಕೂ ಬಂದರು. ಈ ಬೆಡಗಿ ಗಾಸಿಪ್‌ನಿಂದಲೂ ಹೊರತಾಗಿಲ್ಲ.



ಫೋಟೋ: ಕೆ.ಎಸ್.ಮೋಕ್ಷೇಂದ್ರ

# ಸಮಾಜ ಸೇವೆ ನನ್ನ ಇಷ್ಟದ ಕೆಲಸ



*ವೂಡೇ ಪಿ. ಕೃಷ್ಣ*

ಒಬ್ಬೊಬ್ಬರಲ್ಲಿ ಒಂದೊಂದು ಗುಣ ರಕ್ತಗತವಾಗಿ ಬಂದಿರುತ್ತದೆ. ಬಹುಶಃ ಸಮಾಜ ಸೇವೆ ನನಗೆ ರಕ್ತಗತವಾಗಿ ಬಂದಿದೆ. ಏಕೆಂದರೆ ನನ್ನ ತಂದೆ ಹಾಗೂ ಅಜ್ಜ ಸಹ ಸಾಮಾಜಿಕ ಕಾರ್ಯಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡವರು. ನಮ್ಮ ಅಜ್ಜ ಡಬ್ಲ್ಯೂ.ಎಚ್. ಹನುಮಂತಪ್ಪನವರು ಸ್ವಾತಂತ್ರ್ಯ ಹೋರಾಟಗಾರರಾಗಿದ್ದರು. ಅದೇ ರೀತಿ ನಮ್ಮ ತಂದೆ ಡಬ್ಲ್ಯೂ. ಹೆಚ್. ಪುಟ್ಟಯ್ಯನವರೂ ಸಹ ಸ್ವಾತಂತ್ರ್ಯ ಹೋರಾಟಗಾರರು. ಇವರೆಲ್ಲರ ಪ್ರಭಾವದಿಂದ ನನಗೂ ಸಹ ಚಿಕ್ಕವನಿರುವಾಗಲೇ ಸಮಾಜ ಸೇವೆಯ ಆಸಕ್ತಿ ಇತ್ತು.

ನನ್ನ ಮೇಲೆ ತುಂಬಾ ಪ್ರಭಾವ ಬೀರಿದ ವ್ಯಕ್ತಿಯೆಂದರೆ, ಸ್ವಾಮಿ ವಿವೇಕಾನಂದ ಅವರು. ನಾನು ಓದಿದ್ದು ಮೈಸೂರಿನ ರಾಮಕೃಷ್ಣ ವಿದ್ಯಾಶಾಲಾದಲ್ಲಿ. ನಾನು ವಿವೇಕಾನಂದರ ತತ್ವಗಳ ಕಡೆಗೆ ಆಕರ್ಷಿತನಾಗಿದ್ದು ಅದೇ ಸಮಯದಲ್ಲಿ. "ಒಂದು ಸಮಾಜದ ಏಳಿಗೆ ಶಿಕ್ಷಣವೊಂದರಿಂದಲೇ ಸಾಧ್ಯ" ಎಂದು ವಿವೇಕಾನಂದರು ಹೇಳಿದ್ದು ನನ್ನ ಮನಸ್ಸಿಗೆ ನಾಟಿತ್ತು. ಅದನ್ನೇ ನಾನು ಆಗಾಗ ಮೆಲುಕು ಹಾಕುತ್ತಿದ್ದೆ. ನಾನು ಶಿಕ್ಷಣ ಕ್ಷೇತ್ರಕ್ಕೆ ಬರಲು ಇದು ಮುಖ್ಯ ಕಾರಣವಾಯಿತು.

ಕಳೆದ ಹಲವು ವರ್ಷಗಳಿಂದ ನಾನು ಶಿಕ್ಷಣ ಕ್ಷೇತ್ರದಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದೇನೆ. ಪ್ರಸ್ತುತ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿಯಾಗಿದ್ದೇನೆ. ನನಗೆ ಅತ್ಯಂತ ತೃಪ್ತಿ ನೀಡುವ ಕೆಲಸ ಇದು. ಅತೀ ಆಸಕ್ತಿಯಿಂದ ಈ ಸಂಸ್ಥೆಯ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದೇನೆ. ನನ್ನ ಈ ಶ್ರಮಕ್ಕೆ ನಮ್ಮ ಸಂಸ್ಥೆಯ ಇತರ ಸಹೋದ್ಯೋಗಿಗಳೂ ಕೈಗೂಡುತ್ತಾರೆ. ಸಾಮೂಹಿಕ ಕೆಲಸದಲ್ಲಿ ನಂಬಿಕೆ ಇಟ್ಟವನು ನಾನು. ಈ ಪ್ರಪಂಚದಲ್ಲಿ 'ನಾನು' ಎನ್ನುವುದು ಏನೂ ಇಲ್ಲ 'ನಾವು' ಎನ್ನುವುದೇ. ಎಲ್ಲ ಎನ್ನುವುದು ನನ್ನ ನಂಬಿಕೆ.

ನನ್ನ ಸಾಮಾಜಿಕ ಕೆಲಸಕ್ಕೆ ಒಟ್ಟೂ ನಾಲ್ಕು ಅಂಗಗಳಿವೆ. ಒಂದನೆಯದು. ಮೊದಲೇ ಹೇಳಿದಂತೆ ಶಿಕ್ಷಣ ಕ್ಷೇತ್ರ. ಎರಡನೆಯದು ಮಾನವೀಯ ಕಳಕಳಿಯ ಕೆಲಸಗಳು. ಇದಕ್ಕಾಗಿ ನಾನು ಇಂಡಿಯನ್ ರೆಡ್ ಕ್ರಾಸ್ ಸೊಸೈಟಿ ಜೊತೆ ಕೆಲಸ ಮಾಡುತ್ತಿದ್ದು ಪ್ರಸ್ತುತ ರಾಜ್ಯದ ಉಪಾಧ್ಯಕ್ಷನಾಗಿದ್ದೇನೆ. ಮೂರನೆಯದು ರಾಷ್ಟ್ರೀಯ ಸೇವೆ. ಭಾರತ ಸೇವಾ ದಳ ಮತ್ತು ಗಾಂಧಿ ಶಾಂತಿ ಪ್ರತಿಷ್ಠಾನದ ಗೌರವದ ಹುದ್ದೆಯಲ್ಲಿ ನಾನಿದ್ದು ನನ್ನ ರಾಷ್ಟ್ರೀಯ ಸೇವೆಗೆ ಸಹಕಾರಿಯಾಗಿವೆ. ನಾಲ್ಕನೆಯದು. ಯುವಜನ ಸೇವೆ. ಇದೂ ಸಹ ನನ್ನ ಆಸಕ್ತಿಯ ಕ್ಷೇತ್ರವಾಗಿದ್ದು ಹಲವು ವರ್ಷಗಳಿಂದ ಕೆಲಸ ಮಾಡುತ್ತಿದ್ದೇನೆ.

ನನಗೆ ದೊರೆತ ಹಲವು ಪ್ರಶಸ್ತಿಗಳಲ್ಲಿ ರಾಜ್ಯ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿ ಪ್ರಮುಖವಾದದ್ದು. ನಾನು ಆ ಪ್ರಶಸ್ತಿಯನ್ನು ಸ್ವೀಕರಿಸಲು ಹೋದಾಗ ನನಗೆ ನಿಜಕ್ಕೂ ಗಾಬರಿಯಾಗಿತ್ತು. ಏಕೆಂದರೆ, ಅಲ್ಲಿ ಪ್ರಶಸ್ತಿ ಸ್ವೀಕರಿಸಲು ಬಂದಿದ್ದವರೆಲ್ಲಾ ಸುಮಾರು ಎಪ್ಪತ್ತು ವರ್ಷದ ಆಸುಪಾಸಿನವರು. ನಾನು ಮಾತ್ರ ನಲವತ್ತು ವರ್ಷದವನು. ಆ ಸಂದರ್ಭದಲ್ಲಿ ನನಗೆ ಅನ್ನಿಸಿದ್ದೆಂದರೆ, "ನನ್ನ ಮೇಲಿನ ಜವಾಬ್ದಾರಿ ಈ ಪ್ರಶಸ್ತಿಯಿಂದಾಗಿ ಇನ್ನೂ ಹೆಚ್ಚಿದೆ"

ಒಮ್ಮೆ ಒಬ್ಬ ಅಂಗವಿಕಲ ಹುಡುಗನಿಗೆ ನಾನು ಸಹಾಯ ಮಾಡಿದ್ದೆ. ನಾನು ಮಾಡಿದ ಆ ಸಹಾಯದಿಂದಾಗಿ ಆತನಿಗೆ ಅವನು ಕಳೆದುಕೊಂಡ ಕೆಲಸ ಪುನಃ ದೊರಕಿತ್ತು. ಈಗಲೂ ಸಹ ಪ್ರತೀ ಯುಗಾದಿ ದಿನ ಆತ ನನಗೆ ಫೋನ್ ಮಾಡಿ ಕೃತಜ್ಞತೆ ಹೇಳುತ್ತಾನೆ. ಇನ್ನೇನುಬೇಕು ಹೇಳಿ?

**ನಿರೂಪಣೆ: ವಿ.ಭಟ್**

ಶ್ರೀ ವೂಡೇ ಕೃಷ್ಣ ಅವರು ಖ್ಯಾತ ಶಿಕ್ಷಣ ತಜ್ಞರು. ಪ್ರಸ್ತುತ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿಯಾಗಿ, ಬೆಂಗಳೂರು ಕೇಂದ್ರದ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷರಾಗಿ, ಇಂಡಿಯನ್ ರೆಡ್‌ಕ್ರಾಸ್ ಸಂಸ್ಥೆಯ ಉಪಾಧ್ಯಕ್ಷರಾಗಿ ಹಾಗೂ ಭಾರತ್ ಸೇವಾದಳದ ಗೌರವ ಖಜಾಂಚಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ.






**ಅಂತರಾಳದಿಂದ**

ದೀಪಿಕಾ ಪಡುಕೋಣೆ ಅವರ ಮುಖಪುಟ ಚೆನ್ನಾಗಿತ್ತು. ಇದೇ ಸಂಚಿಕೆಯಲ್ಲಿ ಪ್ರಕಟವಾದ ಪೂಜ್ಯ ಡಾ. ವಿ. ಕೃಷ್ಣ ಅವರ ಅಂತರಾಳದ ಮಾತುಗಳನ್ನು ಓದಿ ತುಂಬಾ ಸಂತೋಷವಾಯಿತು. ವಿವೇಕಾನಂದರ ತತ್ವಗಳ ಕಡೆಗೆ ಆಕರ್ಷಿತರಾಗಿ ಸಮಾಜ ಸೇವೆಯಲ್ಲಿ ತೊಡಗಿರುವ ಅವರ ಚಟುವಟಿಕೆಯ ಬಗ್ಗೆ ತಿಳಿದು ಆನಂದವಾಯಿತು.

*ಮಮತಾ ಡಿ.ಕೆ. — ಆನಿಲಕಟ್ಟೆ*

★ ಶಿಕ್ಷಣ ಕ್ಷೇತ್ರ ಮತ್ತು ಸಮಾಜ ಸೇವೆಗಳಲ್ಲಿ ತಮ್ಮ ಛಾಪು ಮೂಡಿಸಿರುವ ಪೂಜ್ಯ ಡಾ. ವಿ. ಕೃಷ್ಣ ಅವರ ಅಂತರಾಳದ ನುಡಿಗಳು ಹಾಗೂ ಅವರ ಚಟುವಟಿಕೆಗಳ ಬಗ್ಗೆ ತಿಳಿದು ಸಂತೋಷವಾಯಿತು.

*ವೀಣಾ — ಮಾಣಿಲ*

**ಚಿತ್ರ ಲೇಖನ**

ವಿನಯ್ ಭಟ್ ಬರೆದ ಲೇಖನ 'ಈ ಕ್ರೌರ್ಯಕ್ಕೆ ಕೊನೆಯಿಲ್ಲವೆ?' ಓದಿ ತುಂಬಾ ಬೇಸರವಾಯಿತು. ಮಾತು ಬಾರದ ಪ್ರಾಣಿಗಳನ್ನು ಬಲಿಕೊಟ್ಟು ಪ್ರಯೋಗ ನಡೆಸುತ್ತಿರುವುದು ನಿಜವಾಗಲೂ ಖೇದಕರ.

*ಮಹಾಲಿಂಗ ಕೆ. — ಉಪ್ಪಿನಂಗಡಿ*

★ ಮಂಗನಿಂದಲೇ ವಿಕಾಸ ಹೊಂದಿದ ಮಾನವ ತನ್ನ ಜಾಣ್ಮೆ ಮತ್ತು ಬುದ್ಧಿಶಕ್ತಿಯಿಂದ ನಡೆಸುತ್ತಿರುವ ಈ ಕ್ರೌರ್ಯ ನಿಜವಾಗಲೂ ಮನ ಕಲುಕುವ ಸಂಗತಿ.

*ಮಂಜು ವಿ. — ಯಲಬೇನಹಳ್ಳಿ*

★ ಸ್ವಾರ್ಥಿಗಳಾದ ಮನುಷ್ಯರು ತಮ್ಮತಮ್ಮಲ್ಲೇ ಹೊಡೆದಾಡಿ ಸಾಯುತ್ತಿರುವಾಗ ಮೂಕ ಪ್ರಾಣಿಗಳ ಮೇಲಿನ ಘೋರ ಕ್ರೌರ್ಯವನ್ನು ಕಡೆಯುವವರು ಯಾರು?

*ಎಸ್.ಕೆ. ರೇಖಾ — ಶಂಕರಕೊಡಿಗೆ*

★ ಮಾನವ ತನ್ನ ಜೀವ ಉಳಿಸಲು ಪ್ರಾಣಿಗಳ ಮೇಲೆ ಕ್ರೌರ್ಯ ತೋರುತ್ತಿರುವುದು ನಿಜವಾಗಲೂ ಭಯಾನಕವೇ ಸರಿ. ಆ ಲೇಖನದೊಂದಿಗೆ ಕೊಟ್ಟಿರುವ ಫೋಟೋಗಳನ್ನು ನೋಡಿ ಅಯ್ಯೋ ಪಾಪ ಎಂದೆನಿಸಿತು. ಮಂಗಳದ ಪುಟಗಳನ್ನು ನೋಡುವುದೇ ಬೇಡ ಎಂದೆನಿಸಿತು. ಇಂತಹ ಕ್ರೌರ್ಯ ಆದಷ್ಟು ಬೇಗ ಕೊನೆಯಾಗಬೇಕು.

*ಚಂದ್ರಶೇಖರ ರೈ — ಸೂತ್ರಬೆಟ್ಟು*

**ಅನ್ಯ-ಅನನ್ಯ**

ಪ್ರಣತಿ ಅವರ ಕಥೆ ಮಾಸ್ತವಿಕತೆಗೆ ಮೆರಗು ಕೊಟ್ಟಂತಿತ್ತು. ಮಕ್ಕಳಿಲ್ಲದವರು ಅನಾಥ ಮಗುವಿಗೆ ಬಾಳು ಕೊಡಲು ನಿರ್ಧರಿಸುವುದು ತಪ್ಪಲ್ಲ. ಆದರೆ ಹಣದ ಮದದಿಂದ ದತ್ತು ತೆಗೆದುಕೊಂಡು ತನಗೆ ಮಗು ಹುಟ್ಟಿದ ಮೇಲೆ ದತ್ತು ಪಡೆದ ಮಗುವನ್ನು ನಿರ್ಲಕ್ಷಿಸುವುದು ಸರಿಯಲ್ಲ. ಇದೊಂದು ನೀತಿ ಕತೆ.

*ಚೇತನಾ ಕೆ. — ಪಿಲಿಮಂಡೆ*

★ ಈ ಕಥೆ ಓದುತ್ತಾ ಹೋದಂತೆ ಹೃದಯ ಭಾರವಾಯಿತು. ಅನಾಥ ಮಗುವನ್ನು ದತ್ತು ಪಡೆದ ಕಲಾವತಿಯ ಬಗ್ಗೆ ಹೆಮ್ಮೆ ಎನಿಸಿತು. ಆದರೆ ಕತೆಯ ಕೊನೆಯಲ್ಲಿ ಕಲಾವತಿಯ ಮೇಲೆ ಜುಗುಪ್ಸೆ ಮೂಡಿತು.

*ಪದ್ಮಾವತಿ ನಾಯ್ಕ್ — ಬೆಳುವಾಯಿ*

**ಒಂದು ಪ್ರೀತಿಯ ಸುತ್ತ**

ಶರತ್ ಕುಮಾರ್ ಬರೆದ ಮಿನಿಕತೆ ತುಂಬಾ ಚೆನ್ನಾಗಿತ್ತು. ಓದಿ ಕಣ್ಣಲ್ಲಿ ನೀರು ಜಿನುಗಿತು. ಪ್ರೀತಿಸಿ ಮದುವೆಯಾಗುವವರನ್ನು ನಾವು ಯಾಕೆ ದೂರ ಇಡಬೇಕೆಂಬುದೇ ಅರ್ಥವಾಗುತ್ತಿಲ್ಲ.

*ರಾಜೇಂದ್ರ ಕಾಂಚನ್ — ಪಡುಗೋಪಾಡಿ*

★ ಕಣ್ ನೋಟದಿಂದ ಆರಂಭಿಸಿ ಹಿರಿಯರನ್ನು ಕಡೆಗಣಿಸಿ, ಸಹಾಯ ಹಸ್ತಗಳಿಗೆ ಕೈ ಚಾಚಿ ವಿಧಿಯ ಆಟದಿಂದ ಪತಿ ಬದುಕಿಗೆ ಅಂತ್ಯ ಹಾಡಿದಾಗ ಮಗನಿಗಾಗಿಯಾದರೂ ಬದುಕಬೇಕೆಂಬ ಛಲ ತಳೆದು ಸುತ್ತಲೂ ಕೆಟ್ಟ ಪ್ರಪಂಚದ ನಡುವೆಯೂ ಸಂಕಟ ಬಂದಾಗ ವೆಂಕಟರಮಣ ಅನ್ನುವ ಹಾಗೆ ಪ್ರೀತಿಗೆ ಜೈ ಹೇಳುವ ಬದಲು ಧಿಕ್ಕಾರದ ಘೋಷಣೆಗೆ ಸಿದ್ಧಳಾಗುವುದು ನೈಜ ಘಟನೆಯಂತೆ ಮಿನಿಕತೆ ಅಚ್ಚುಕಟ್ಟಾಗಿ ಮೂಡಿಬಂದಿದೆ.

*ಅಶೋಕ ಪಾ. ದುರ್ಗದಕೇಮಿ — ದಾಸಬೆಸ್ನೂರು*

★ ಮಿನಿಕತೆ ಅರ್ಥಪೂರ್ಣವಾಗಿ ಮೂಡಿಬಂದಿದೆ. ಓದಿ ಸಂತೋಷವಾಯಿತು. ಲೇಖಕರಿಗೂ ಮತ್ತು ಮಂಗಳಕ್ಕೂ ಧನ್ಯವಾದ.

*ಶಕುಂತಳ ಕೆ. ಎಸ್. — ಅಂಡಾರು*

**ನಗೆ ಬರಹ**

ವಿಮಲಾ. ವಿ ಶೆಣೈ ಅವರು ಬರೆದ ನಗೆ ಬರಹ ತುಂಬಾ ಚೆನ್ನಾಗಿತ್ತು. ನಾನು ಸಹ 'ಇದು' ಉಪಯೋಗಿಸುತ್ತಾ ಪೇಚಿಗೆ ಸಿಲುಕುತ್ತಿರುತ್ತೇನೆ.

*ತಂಗಾಳಿ ಎಸ್.ಕೆ. — ಬಸರಿಕಟ್ಟೆ*

★ ಬಸ್ತಿ ವಿಮಲಾ ವಿ. ಶೆಣೈ ಅವರ ಹಾಸ್ಯ ಲೇಖನ ಓದಿ ನಕ್ಕು ನಕ್ಕು ಹೊಟ್ಟೆ ಹುಣ್ಣಾಯಿತು. ಯಾಕೆಂದರೆ ನಮ್ಮ ಅಂಗಡಿಯಲ್ಲಿ ಕೆಲವೊಮ್ಮೆ ಗಿರಾಕಿ ನನಗೆ ಅದು ಕೊಡಿ, ಅಲ್ಲ ಇದು ಕೊಡಿ ಎನ್ನುವುದನ್ನು ದಿನವೂ ಕೇಳುತ್ತಿರುತ್ತೇವೆ. ಇದನ್ನು ಓದಿದಾಗ ಅದು ನೆನಪಾಯಿತು.

*ಸುಬ್ರಮಣ್ಯ ಪೂಜಾರಿ ಕುಂದಬಾರಂದಾಡಿ*

★ ಮಂಗಳದಲ್ಲಿ ಪ್ರಕಟವಾದ ನನ್ನ ನಗೆಬರಹ 'ನನ್ನ ಇದು ಓದಿ' ಓದುಗರು ಪತ್ರಗಳ ರಾಶಿಯನ್ನೇ ಕಳುಹಿಸುತ್ತಿದ್ದಾರೆ. ಇಷ್ಟೊಂದು ಪ್ರತಿಕ್ರಿಯೆ ಬರಬಹುದೆಂದು ನಾನು ನಿರೀಕ್ಷಿಸಿರಲಿಲ್ಲ. ಮಂಗಳ ಓದುಗರಿಗೆ ತುಂಬಾ ಇಷ್ಟವಾಗಿದೆ. ಪ್ರಕಟಿಸಿದ ಮಂಗಳಕ್ಕೆ ಧನ್ಯವಾದ.

*ಬಸ್ತಿ ವಿಮಲ ವಿ. ಶೆಣೈ — ಬಸ್ತಿ*

★ 'ನನ್ನ ಇದು ಓದಿ' ಎಂಬ ಶೀರ್ಷಿಕೆ ನಗು ತಡೆಯಲಾಗಲಿಲ್ಲ. ಮನೆಯಲ್ಲೊಬ್ಬ ಮರೆಗುಳಿಯಿದ್ದರೆ ಏನೆಲ್ಲ ಅವಾಂತರಗಳಾಗುತ್ತವೆಂಬುದನ್ನು ಹಾಸ್ಯ ಮಿಶ್ರಿತ ಶೈಲಿಯಲ್ಲಿ ಬರೆದು ಲೇಖಕಿ ಮಂಗಳ ಓದುಗರ ಮನ ಗೆದ್ದಿದ್ದಾರೆ. ಖಂಡಿತವಾಗಲೂ ಇದೊಂದು ಸೂಪರ್ ನಗೆ ಬರಹ.

*ಮಮತಾ ಎಂ. ರಾವ್ — ಮುಂಬೈ-92*

**ನಗೆ ಹೊನಲು**

ಮಂಗಳದಲ್ಲಿ ಪ್ರಕಟವಾಗುತ್ತಿರುವ ಪ್ರತಿಯೊಂದು ಅಂಕಣವೂ ಚೆನ್ನಾಗಿವೆ. ಅದರಲ್ಲೂ ನಗೆ ಹೊನಲು ಅಂಕಣ ನಮಗೆಲ್ಲರಿಗೂ ತುಂಬಾ ಅಚ್ಚುಮೆಚ್ಚು. ಒಂದು ಕ್ಷಣ ಓದಿ ಎಲ್ಲಾ ಮರೆಯಲೂ ನಾವು ವಾರವಾರವೂ ಮಂಗಳ ಬರುವುದನ್ನೇ ಕಾಯುತ್ತಿದ್ದೇವೆ.

*ಆಶಾ, ಉಷಾ, ನಿತೇಶ, ಜ್ಯೋತಿ ಮತ್ತು ಸುಪ್ರೀತಾ — ನಿಂಜೂರು*

**ಲಗುಬಗೆ**

ಸಂಚಿಕೆ 44ರಲ್ಲಿ ಪ್ರಕಟವಾದ ಅದೊಂದು ಅದೃಶ್ಯ ಲೋಕ ಲೇಖನ ನನಗೆ ತುಂಬಾ ಖುಷಿ ಕೊಟ್ಟಿತು. ಪ್ರತಿ ವಾರವೂ ಒಂದಲ್ಲ ಒಂದು ಹೊಸ ವಿಚಾರವನ್ನು ಲಗುಬಗೆ ಅಂಕಣದ ಮೂಲಕ ಪರಿಚಯಿಸುತ್ತಿರುವುದು ಸಂತೋಷದ ವಿಷಯ. ನನ್ನ ತಂದೆ ತಾಯಿಗೂ ಹತ್ತು ಜನ ಮಕ್ಕಳಿದ್ದೇವೆ. ನಾನು ಒಂಬತ್ತನೆಯವಳು.

*ಸುಲತಾ — ಉಡುಪಿ*

★ ಮಂಗಳದಲ್ಲಿ ಪ್ರಕಟವಾಗುತ್ತಿರುವ ಎಲ್ಲಾ ಅಂಕಣಗಳು ಒಂದಕ್ಕಿಂತ ಒಂದು ಚೆನ್ನಾಗಿವೆ. ಅದರಲ್ಲು ಲಗುಬಗೆ, ನಿಮ್ಮೊಂದಿಗೆ, ಪಾಕಪಾಕ, ಸೌಂದರ್ಯ, ದ್ವಂದ್ವ ಅಂಕಣಗಳನ್ನು ಓದಿ ಖುಷಿ ಪಡುತ್ತಿದ್ದೇವೆ. ಈ ಅಂಕಣಗಳು ಮಂಗಳಕ್ಕೆ ಹೊಳಪು ಕೊಡುತ್ತಿವೆ.

*ಶ್ರೀಮತಿ, ರೇವತಿ, ಕಲಾವತಿ ಮಾರಣಕಟ್ಟೆ*

**ದ್ವಂದ್ವ**

ನಾನು ಹೆಚ್ಚು ಇಷ್ಟಪಡುವ ವಿಚಾರಗಳು ದ್ವಂದ್ವ ಅಂಕಣದಲ್ಲಿ ಪ್ರಕಟವಾಗುತ್ತಿವೆ. ಅದರಿಂದ ನಾನು ಮಂಗಳ ಕೈಗೆ ಬಂದೊಡನೆ ಮೊದಲು ಓದುವುದು ಇದನ್ನೇ. ಯಾವುದೇ ವಿಷಯಗಳನ್ನು ಸರಿಯಾಗಿ ವಿಚಾರಿಸದೆ ಮೂಢ ನಂಬಿಕೆಗೆ ಜೋತುಬೀಳುವುದರಿಂದ ನಾವೇ ಮೂರ್ಖರಾಗಬೇಕಾಗುತ್ತದೆ ಎಂಬುದನ್ನು ಈ ಅಂಕಣ ಓದುವುದರಿಂದ ತಿಳಿಯುತ್ತದೆ.

*ಲೋಕೇಶ್ ಆಚಾರ್ಯ — ಇಂದ್ರಾಳಿ*

**ಮಂಥನ**

ನೊಂದವರ ಬದುಕಿಗೆ ಸಾಂತ್ವನ ಹೇಳುವ ಸ್ವಾಮೀಜಿಯವರ ವಿಚಾರಧಾರೆ ಬದುಕಿಗೆ ದಾರಿದೀಪವಾಗಿದೆ. ಅವರ ಮಾತುಗಳನ್ನು ಬದುಕಿನಲ್ಲಿ ಅಳವಡಿಸಿಕೊಂಡರೆ ನೆಮ್ಮದಿಯಿಂದ ಬದುಕಲು ಸಾಧ್ಯ.

*ಕಿರಣ್ ಪ್ರಸಾದ್ — ಕುಂಡಡ್ಕ*

**ಕಾವ್ಯ**

ಸುಬ್ಬುಚಟ್ಟು ಅವರ ಕವನ ನಿರಾಕರಣೆ ಸುಂದರವಾಗಿದೆ. ಪ್ರೀತಿಯ ನಿರಾಕರಣೆ ಬಗೆಗೆ ಸುಂದರವಾದ ಕವನವನ್ನು ರಚಿಸಿದ್ದಾರೆ. ಧನ್ಯವಾದ.

*ನಿತಾ — ಕುಂದಾಪುರ*

★ ಗಾಯತ್ರಿ ಎಸ್. ಹಾಲ್ಕಲ್ ಅವರ ಅಳುವ ಹುಡುಗಿ ಕವನ ಚೆನ್ನಾಗಿದೆ. ನಿನ್ನ ಕಣ್ಣೀರಿನಾಚೆಗೂ ಬದುಕೊಂದಿದೆ. ಅದು ನಿನಗಾಗಿ ಕಾದಿದೆ. ಅದನ್ನು ಕಣ್ತುಂಬಿಸಿಕೋ ಎನ್ನುತ್ತಾ ಅಳುಮುಂಜಿಯ ಬದುಕಿನ ಭರವಸ ಮೂಡಿಸಿ ಸ್ಫೂರ್ತಿ ತುಂಬುವ ಚಂದದ ಕವನ.

*ಉದಯ ಶೆಟ್ಟಿ — ಕೋಟ*

**ಮಿಸ್ಡ್ ಕಾಲ್**

ಈ ಅಂಕಣ ತುಂಬಾ ಚೆನ್ನಾಗಿ ಮೂಡಿಬರುತ್ತಿದೆ. ಮೊಬೈಲ್ ದುರ್ಬಳಕೆಯ ಬಗ್ಗೆ ಮತ್ತು ಮಹಿಳೆಯರು ಎಚ್ಚೆತ್ತುಕೊಳ್ಳಲು ಮಾರ್ಗದರ್ಶನ ನೀಡುವ ಸೂಕ್ತವಾದ ಅಂಕಣ. ಪ್ರಕಟಿಸುತ್ತಿರುವ ಮಂಗಳಕ್ಕೆ ಧನ್ಯವಾದ.

*ಆನ್ಸರ್ ಕಲ್ಲರ್ಪೆ — ಪೆರಾಜೆ*

★ ಮಿಸ್ಡ್ ಕಾಲ್ ಅಂಕಣ ಓದುವಾಗ ನನಗೆ ನಿಜವಾಗ್ಲೂ ತುಂಬಾ ಬೇಸರವಾಯಿತು. ಮೊಬೈಲ್‌ನಿಂದ ಮಹಿಳೆಯರಿಗೆ ಇಷ್ಟೆಲ್ಲಾ ಅಪಾಯವಿದೆಯೇ ಎಂದು ಭಯವಾಗುತ್ತಿದೆ.

*ಎ.ಎಸ್. ಬಬಿತಾ — ಕಾರ್ಕಳ*

**ಧಾರಾವಾಹಿಗಳು**

★ ರಾಕ್ಷಸ ದಂಪತಿ ಧಾರಾವಾಹಿ ತುಂಬಾ ಚೆನ್ನಾಗಿ ಮೂಡಿ ಬರುತ್ತಿದೆ. ಅದನ್ನು ಓದುವಾಗ ಭಯಮಿಶ್ರಿತ ಕುತೂಹಲ ಮೂಡುತ್ತಿದೆ. ಪಾಪ ಚಂದ್ರಿಕಾಳಿಗೆ ಏನಾಗುತ್ತದೋ ಏನೋ ಎಂಬ ಆತಂಕವಾಗುತ್ತಿದೆ.

*ಮಲ್ಲಿನ್, ಜ್ಯೋತಿ [illegible] — ಎಣ್ಣೆಹೊಳೆ*

★ ಕೌಂಡಿನ್ಯ ಅವರ ಭರ್ಜರಿ ಮರ್ಡರಿ ಮಿಸ್ಟರಿ ಆತಂಕ ಧಾರಾವಾಹಿ ತುಂಬಾ ಚೆನ್ನಾಗಿ ಮೂಡಿ ಬರುತ್ತಿದೆ. ಓದುತ್ತಿದ್ದರೆ ಈ ಎಲ್ಲ ಕೊಲೆಗಳನ್ನು ಪ್ರಲಂಗನೇ ತಮ್ಮ ಉದಯನೇ ಮಾಡಿ ಆ ಆಪವಾದ ಆಕ್ಷನ ಮೇಲೆ ಹೊರಿಸುತ್ತಿದ್ದಾನೆ ಎಂದೆನಿಸುತ್ತಿದೆ.

*ಆನಂದ [illegible] — ಬೆಳಂಗಡಿ*

★ ಮಂಗಳ ಕೈಗೆ ಬಂದೊಡನೆ ನಾವು ಮೊದಲು ಓದುವುದು ರಹಸ್ಯ ಧಾರಾವಾಹಿ. ಈ ಧಾರಾವಾಹಿಯ ಅಪರಾಧಿ ಯಾರೆಂದು ಓದುಗರಿಗೆ ಗೊತ್ತು. ಆದರೆ ಅರ್ಚನಾಳಿಗೆ ಗೊತ್ತಿಲ್ಲ. ಆದರೆ ಇದರ ಗುಟ್ಟು ಆ ವಿಷಯ ಯಾವಾಗ ಅರ್ಚನಾಳಿಗೆ ತಿಳಿಯುತ್ತದೋ ಏನೋ ಎಂಬ ಕುತೂಹಲ ತಡೆಯಲಾಗುತ್ತಿಲ್ಲ.

*ದಯಾನಂದ, ಅಶ್ವಿನಿ, ಶೋಭಾ, ಉಷಾ, [illegible] — ಇಂದ್ರಪುರ*

★ ಟಾರ್ಗೆಟ್ ತುಂಬಾ ಚೆನ್ನಾಗಿದೆ. ವಾಸುದೇವ ಮತ್ತು ಕಲ್ಯಾಣ ಶೇರಿಕೊಂಡರು. ಮೀನಾಕ್ಷಿಯ ಭವಿಷ್ಯ ಏನಾಗಬಹುದು? ಜಾನಮ್ಮ ಅವಳಿಗ ರಕ್ಷಣೆ ಕೊಡುತ್ತಾಳೆಯೇ ಎಂದು ತಿಳಿಯಲು ಕಾಯುತ್ತಿದ್ದೇನೆ.

*ಅರುಣಾ ಎಸ್. — ಬಾರಾಡಿ ಬೋರ್‌ಜಾಲ್*

★ ಮ.ನಾ. ಕೃಷ್ಣಮೂರ್ತಿಯವರ ಶಾಂತಲ ಧಾರಾವಾಹಿ ತುಂಬಾ ಚೆನ್ನಾಗಿದೆ. ಮರು ಮದುವೆಯಾದ ಅರವಿಂದನೂ ಶಾಂತಲೆಗೆ ಎಂದೂ ಕಷ್ಟಕೊಡದಿರಲಿ. ಶಾಂತಲೆ ಹೊಣೆಗಾರಿಕೆಯಿಂದ ಇರಲಿ ಎಂದುಕೊಂಡಿದ್ದ ನಮಗೆ ಆತಂಕವಾಗಿದೆ. ಮುಂದೇನು?

*ರೂಪಶ್ರೀ ರೈ [illegible] — ಪೆರ್ಲಾಲ*

# ಸಂಭ್ರಮಿಸಿದ ಮಂಗಳ

● ವಸಿಷ್ಠ

ಮಂಗಳ ವಾರ ಪತ್ರಿಕೆಯ 24 ವರ್ಷಗಳ ಸುದೀರ್ಘ ಪಯಣದಲ್ಲಿ 2008ರ ಅಕ್ಟೋಬರ್ 31 ಮತ್ತೊಂದು ಸಂಭ್ರಮದ ದಿನ. ಮಂಗಳ ಸಿಬ್ಬಂದಿಗೆ, ಏಜೆಂಟರಿಗೆ, ಅಭಿಮಾನಿಗಳಿಗೆ ಸಡಗರವೋ ಸಡಗರ. ಮಂಗಳ ಅಂದು ತನ್ನ 24 ವರ್ಷ ಪೂರೈಸಿ ಕಾಲು ಶತಮಾನದ ಹೊಸ ನಿಲ್ದಾಣದತ್ತ ಕಾಲಿಟ್ಟಿತು.

ಅಂದು ರಜತೋತ್ಸವ ವರ್ಷಾಚರಣೆಯ ಅರಂಗೇಟ್ರಂ ಅಂದರೆ ರಂಗಪ್ರವೇಶ. ಇಡೀ ವರ್ಷ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಮಂಗಳ ಹಮ್ಮಿಕೊಂಡಿರುವ, ಸಾಹಿತ್ಯಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕ ಕಾರ್ಯಕ್ರಮಗಳಿಗೆ ಹಸಿರು ನಿಶಾನೆ ತೋರಿಸಿದ ದಿನ. ಬೆಂಗಳೂರು ನೃಪತುಂಗ ರಸ್ತೆಯಲ್ಲಿರುವ ಯವನಿಕಾದಲ್ಲಿ ಬೆಳಗ್ಗೆ 10ಕ್ಕೆ ಕಾರ್ಯಕ್ರಮ ನಿಗದಿ.



ನ್ಯಾಯಮೂರ್ತಿ ಎಸ್.ಆರ್. ನಾಯಕ್ ಅವರಿಂದ ಉದ್ಘಾಟನೆ

ಕಾರ್ಯಕ್ರಮದ ರಂಗ ಸಜ್ಜಿಕೆಯನ್ನು ವಿಶೇಷವಾಗಿ ಅಲಂಕರಿಸಲಾಗಿತ್ತು. ನಮ್ಮ ಸಂಸ್ಥೆಯ ಮುಖ್ಯ ಕಲಾವಿದರಾದ ಶ್ರೀ ಟಿ.ಕೆ. ಸುಬ್ರಮಣಿ ರೂಪಿಸಿದ ಮಂಗಳ 25 ಲಾಂಛನ ರಂಗಸ್ಥಳದ ಹಿಂಪರದೆಯಲ್ಲಿ ವಿಜೃಂಭಿಸುತ್ತಿತ್ತು. ಈ ಲಾಂಛನವನ್ನು ಪುಷ್ಪಗುಚ್ಛಗಳಿಂದ ಅಲಂಕರಿಸಲಾಗಿತ್ತು.

ಮಂಗಳದ 25ನೇ ವರ್ಷಾಚರಣೆಯ ಸಂಭ್ರಮಕ್ಕೆ ಮಂಗಳ ವಾದ್ಯದ ಇಂಬುಕೊಟ್ಟವರು ಕರ್ನಾಟಕ ಸಂಗೀತ-ನೃತ್ಯ ಅಕಾಡಮಿ ಅಧ್ಯಕ್ಷರಾದ ಅಂತಾರಾಷ್ಟ್ರೀಯ ಖ್ಯಾತಿಯ ಕ್ಲಾರಿಯೋನೆಟ್ ಕಲಾವಿದ ಪಂಡಿತ್ ನರಸಿಂಹಲು ವಡವಾಟಿ. ಸಮಾರಂಭದ ಆರಂಭಕ್ಕೆ ಮುನ್ನ ಈ ಮಂಗಳ ವಾದ್ಯ ನುಡಿಸಿ ಇಡೀ ವರ್ಷ ಆಚರಿಸುವ ಕಾರ್ಯಕ್ರಮಗಳಿಗೆ ಯಶಸ್ಸು ಹಾಗೂ ಶುಭ ಕೋರಿದ್ದು ಅತ್ಯಂತ ಔಚಿತ್ಯಪೂರ್ಣವಾಗಿತ್ತು. ವಡವಾಟಿಯವರು ಸುಮಾರು 50 ನಿಮಿಷ ಸಂಭ್ರಮದಲ್ಲಿ ಮುಳುಗಿದ್ದವರನ್ನು ಬೇರೊಂದು ಲೋಕಕ್ಕೆ ಕರೆದೊಯ್ದರು.

ಸುಮಾರು 10-40ಕ್ಕೆ ಆರಂಭವಾದ ಮುಖ್ಯ ಕಾರ್ಯಕ್ರಮಕ್ಕೆ ಆಗಮಿಸಿದ್ದ ರಾಜ್ಯ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷರಾದ ಸನ್ಮಾನ್ಯ ನ್ಯಾಯಮೂರ್ತಿ ಶ್ರೀ ಎಸ್.ಆರ್. ನಾಯಕ್ ಅವರು ಜ್ಯೋತಿ ಬೆಳಗಿ ವರ್ಷಾಚರಣೆಯ ಕಾರ್ಯಕ್ರಮಕ್ಕೆ ಹಸಿರು ನಿಶಾನೆ ತೋರಿದ್ದು ಅತ್ಯಂತ ಅರ್ಥಪೂರ್ಣವಾಗಿತ್ತು. ಯಾವಾಗಲೂ 'ಲೇಡೀಸ್






ಸಮಾರಂಭದಲ್ಲಿ ಭಾಗವಹಿಸಿದ್ದ ಡಾ|| ವಿ.ಎಸ್.ಮೂರ್ತಿ, ಶ್ರೀಮತಿ ಪ್ರಮೀಳಾ ನೇಸರ್ಗಿ, ಶ್ರೀ ಡಿ.ಎಲ್. ಸುರೇಶ್ ಬಾಬು.

## ಸಂಭ್ರಮಿಸಿದ ಮಂಗಳ

(19ನೇ ಪುಟದಿಂದ)

ಅವರು ಸರ್ಕಾರಕ್ಕೆ ನೀಡಿದ ಸಲಹೆಯನ್ನು ಅತ್ಯಂತ ಗೌರವದಿಂದ ಸ್ವೀಕರಿಸಿದರು.

ಮಂಗಳ ವಾರ ಪತ್ರಿಕೆ ತಮ್ಮ ಬಗ್ಗೆ ಬರೆದ ನಾಲ್ಕು ಒಳ್ಳೆಯ ಮಾತುಗಳನ್ನು ನೆನಪಿಸಿಕೊಂಡ ಕು. ಶೋಭಾ ಈ ಶಹಭಾಸಗಿರಿಗೆ ತಾವು ಪಾತ್ರರಾಗಲು ಕಾರಣರಾದವರೆಲ್ಲರನ್ನೂ ಸ್ಮರಿಸಿಕೊಂಡರು ಮತ್ತು ಅವರ ಪಟ್ಟ ಶ್ರಮದಿಂದ ಈ ಯಶಸ್ಸು ಸಾಧ್ಯವಾಯಿತು ಎಂದು ಹೇಳಲು ಮರೆಯಲಿಲ್ಲ. ಇಡೀ ಭಾಷಣದುದ್ದಕ್ಕೂ ಈ ರಾಜ್ಯದ ಬಗ್ಗೆ ರಾಷ್ಟ್ರದ ಬಗ್ಗೆ ಅವರಿಗಿರುವ ಕಳಕಳಿ ಕೇಳುಗರ ಹೃದಯ ತಟ್ಟಿತು. ರಾಜಕಾರಣಿಗಳಿಂದಾಗಿರುವ ಲೋಪದೋಷಗಳನ್ನು ಯಾವುದೇ ಬಿಗುಮಾನವಿಲ್ಲದೆ ಒಪ್ಪಿಕೊಂಡರು.

ನಮ್ಮ ಹಿರಿಯರು ಕಂಡ ಸ್ವಾತಂತ್ರ್ಯದ ಕನಸನ್ನು ನಾವು ನುಚ್ಚು ನೂರು ಮಾಡಿದ್ದೇವೆ. ಭ್ರಷ್ಟಾಚಾರವನ್ನು ಬೆಳಸಿ ಪೋಷಿಸಿದ್ದೇವೆ. ಇಂಥ ಸ್ವಾತಂತ್ರ್ಯ ಬೇಕಿತ್ತೇ? ಎಂದು ಅವರೆಲ್ಲ ದುಃಖಿಸುವಂತೆ ಮಾಡಿದ್ದೇವೆ ಎಂಬ ಅವರ ಮಾತುಗಳು ಇಂದಿನ ವಾಸ್ತವತೆಗೆ ಹಿಡಿದ ಕನ್ನಡಿಯಾಗಿತ್ತು. ಕಾಲೇಜು ದಿನಗಳಲ್ಲಿ ಮಂಗಳದಲ್ಲಿ ಬರುತ್ತಿದ್ದ ಅತ್ಯುತ್ತಮ ಕತೆ, ಧಾರಾವಾಹಿಗಳನ್ನು ಓದುತ್ತಿದ್ದುದಾಗಿ ಮತ್ತು ಮಂಗಳ ಬರುವಿಕೆಗಾಗಿ ಕಾಯುತ್ತಿದ್ದುದನ್ನು ನೆನಪಿಸಿಕೊಂಡರು. ಇತ್ತೀಚೆಗೆ ಮಂಗಳ ಪತ್ರಿಕೆ ಓದುತ್ತಿಲ್ಲವೆಂಬುದನ್ನು ಪ್ರಾಂಜಲ ಮನಸ್ಸಿನಿಂದ ಒಪ್ಪಿಕೊಂಡರು. ಈಗಿನಿಂದಲೇ ಮಂಗಳ ಓದುವ ಪರಿಪಾಠ ಮುಂದುವರಿಸುತ್ತೇನೆಂದರು.

ಶೋಭಾ ಅವರ ಮಾತುಗಳನ್ನು ಕೇಳಿದ ಸಭಿಕರು ಆಕೆ ವಾಸ್ತವಕ್ಕೆ ತೀರಾ ಹತ್ತಿರವಾಗಿದ್ದಾರೆಂದು ಭಾವಿಸಿದರು. ಆ ಮಾತನ್ನು ಅನಂತರ ಆಡಿಯೂ ತೋರಿಸಿದರು.

ಮುಖ್ಯ ಅತಿಥಿಯಾಗಿ ಪಾಲ್ಗೊಂಡಿದ್ದ ಕರ್ನಾಟಕ ಚಲನ ಚಿತ್ರ ವಾಣಿಜ್ಯ ಮಂಡಳಿ ಅಧ್ಯಕ್ಷೆ ಡಾ. ಶ್ರೀಮತಿ ಜಯಮಾಲಾ ಅವರೂ ಸಹ ಮಂಗಳ ವಾರ ಪತ್ರಿಕೆಯ ಜೊತೆಗಿನ ತಮ್ಮ ಆತ್ಮೀಯತೆಯ ಕ್ಷಣಗಳನ್ನು ನೆನಪಿಸಿಕೊಂಡರು. ಚಿತ್ರರಂಗ ಹಾಗೂ ಬಡ ವರ್ಗದ ಮಹಿಳೆಯರ ಬಗ್ಗೆ ಮಂಗಳಕ್ಕಿರುವ ಕಳಕಳಿ ಅವರ ಸಮಸ್ಯೆಗಳನ್ನು ಪ್ರತಿಬಿಂಬಿಸಿದ ರೀತಿ ಪ್ರಶಂಸನೀಯ ಎಂದು ಹೇಳಿದ್ದು ಮಂಗಳ ಪತ್ರಿಕೆಯ ಕಾರ್ಯವೈಖರಿಯನ್ನು ಎಷ್ಟು ಹತ್ತಿರದಿಂದ ನೋಡಿದ್ದಾರೆಂಬುದಕ್ಕೆ ಸಾಕ್ಷಿಯಾಯಿತು.

ಮಂಗಳವನ್ನು ಬೆಳೆಸಿ, ಪೋಷಿಸಿ ಅದು ಉತ್ತುಂಗಕ್ಕೇರುವಲ್ಲಿ ಅಗತ್ಯ ಸಲಹೆ ಮಾರ್ಗದರ್ಶನ ನೀಡಿದ ಮಾಜಿ ಸಂಪಾದಕ ಶ್ರೀಯುತ ಬಾಬು ಕೃಷ್ಣಮೂರ್ತಿಯವರು ತಮ್ಮ ಹಳೆಯ ಅನುಭವಗಳನ್ನು ಸಂಸ್ಥಾಪಕ ಪ್ರಾತಃಸ್ಮರಣೀಯ ಎಂ.ಸಿ. ವರ್ಗೀಸ್ ಅವರೊಡನಿನ ತಮ್ಮ ಒಡನಾಟವನ್ನೂ ನೆನಪಿಸಿಕೊಂಡರು. ಅವರ ನಾಲ್ವರು ಮಕ್ಕಳಾದ ಶ್ರೀಯುತ ಸಾಬು ವರ್ಗೀಸ್, ಶ್ರೀಯುತ ಸಾಜನ್ ವರ್ಗೀಸ್, ಡಾ. ಸಜೀ ವರ್ಗೀಸ್ ಮತ್ತು ಶ್ರೀಯುತ ಬಿಜು ವರ್ಗೀಸ್ ನೀಡಿದ ಸಹಕಾರ, ನಡೆಸಿಕೊಂಡ ರೀತಿಯ ಬಗ್ಗೆ ಪ್ರಶಂಸೆ ವ್ಯಕ್ತಪಡಿಸಿದರು.

ಈ ಸುಂದರ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಮಂಗಳಂ ಪತ್ರಿಕಾ ಸಮೂಹದ ಪ್ರಧಾನ ಸಂಪಾದಕ ಶ್ರೀ ಸಾಬು ವರ್ಗೀಸ್ ಕನ್ನಡಿಗರ ಔದಾರ್ಯವನ್ನು ಮನ ತುಂಬಿ ಹೊಗಳಿದರು. ಇದೇ ರೀತಿಯ ಅಭಿಮಾನ, ವಿಶ್ವಾಸ, ಪ್ರೀತಿ ನಮ್ಮ ಮುಂದಿನ ಯೋಜನೆಗಳ ಬಗೆಗೂ ಇರಲಿ ಎಂದು ವಿನಂತಿಸಿಕೊಂಡರು.

ಶ್ರೀಮತಿ ವಡವಾಟಿ ಶಾರದಾ ಭರತ್ ಅವರು ಸುಮಧುರ ಭಾವಪೂರ್ಣ ಪ್ರಾರ್ಥನೆಯೊಂದಿಗೆ ಆರಂಭವಾದ ಸಮಾರಂಭಕ್ಕೆ ಸಂಪಾದಕ ವೆಂಕಟನಾರಾಯಣ ಸರ್ವರನ್ನೂ ಸ್ವಾಗತಿಸಿದರು. ಒಂದು ನಿಮಿಷ ಮೌನಾಚರಣೆಯೊಂದಿಗೆ ಮಂಗಳ ಪತ್ರಿಕಾ ಸಮೂಹದ ಸಂಸ್ಥಾಪಕ ಎಂ.ಸಿ.ವರ್ಗೀಸ್ ಅವರನ್ನು ನೆನಪಿಸಿಕೊಳ್ಳಲಾಯಿತು.

ಮಂಗಳ ಪತ್ರಿಕೆಯ ಹಿರಿಯ ಉಪಸಂಪಾದಕ ಬೇಬಿ ಎಂ ಮಾಣಿಯಾಟ್ ಅವರು ಮಂಗಳಂ ಪತ್ರಿಕಾ ಸಮೂಹ ಕೇರಳ ಮತ್ತು ಕರ್ನಾಟಕದಲ್ಲಿ ಮೂಡಿಸಿದ ಸುಭದ್ರ ಹೆಜ್ಜೆ ಗುರುತುಗಳನ್ನು ಸಭಾಸದರ ಮನಸ್ಸಿನ ಮೇಲೂ ಮೂಡಿಸಿದರು. ಹಿರಿಯ ಉಪ ಸಂಪಾದಕ ನರೇಂದ್ರ ಪಾರೆಕಟ್ ಗಣ್ಯರಿಂದ ಬಂದಿದ್ದ ಶುಭ ಸಂದೇಶಗಳನ್ನು ಓದಿದರು.

ಈ ಸಮಾರಂಭದಲ್ಲಿ ಹಿರಿಯ ಪತ್ರಕರ್ತ ಹಾಗೂ ಮಾಧ್ಯಮ ಅಕಾಡೆಮಿಯ ಮಾಜಿ ಅಧ್ಯಕ್ಷ ವಿ.ಎನ್.ಸುಬ್ಬರಾವ್, ಹಿರಿಯ ಸಾಹಿತಿಗಳಾದ ಡಾ|| ಸಾ.ಶಿ. ಮರುಳಯ್ಯ, ಪ್ರೇಮಾಭಟ್ ದಂಪತಿ, ಮಾಜಿ ಶಾಸಕ ಯು.ಆರ್. ಸಭಾಪತಿ, ಶಿಕ್ಷಣ ತಜ್ಞ ವೂಡೇ ಕೃಷ್ಣ, ಮಾಜಿ ಶಾಸಕಿ ಶ್ರೀಮತಿ ಪ್ರಮೀಳಾ ನೇಸರ್ಗಿ, ಹಿರಿಯ ಪೊಲೀಸ್ ಅಧಿಕಾರಿ ಶ್ರೀ ಕೆ.ವಿ.ಆರ್. ಟಾಗೋರ್ ಮುಂತಾದವರು ಪಾಲ್ಗೊಂಡಿದ್ದರು.

ಮಂಗಳಂ ಪತ್ರಿಕಾ ಸಮೂಹದ ಹಿರಿಯ ಅಧಿಕಾರಿಗಳಾದ ಶ್ರೀ ಹಕೀಂ.ನಟ್ಟಾಶ್ಶೇರಿ, ಶ್ರೀ ಪ್ರಕಾಶ್ ಮ್ಯಾಥ್ಯೂ ಮತ್ತು ಶ್ರೀ ಪಿ.ಕೆ. ಚಾಂಡಿ ಅವರು ಕೊಟ್ಟಾಯಂನಿಂದ ಬಂದು ಈ ಸಮಾರಂಭದಲ್ಲಿ ಪಾಲ್ಗೊಂಡು ನಮ್ಮ ಸಂಭ್ರಮಕ್ಕೆ ಮತ್ತಷ್ಟು ಮೆರುಗು ತಂದರು.

ಈ ಸಂಭ್ರಮದ ಸಮಾರಂಭವನ್ನು ತುಂಬ ಅಚ್ಚುಕಟ್ಟಾಗಿ ನಡೆಸಿಕೊಟ್ಟವರು ಸಹಾಯ, ಸಹಕಾರ ನೀಡಿದವರು, ತಮ್ಮನ್ನು ಹಾಗೂ ಇತರ ಇಬ್ಬರನ್ನು ಗೌರವಿಸಿದ ಆಡಳಿತ ವರ್ಗ, ಅಭಿಮಾನಿಗಳು, ರಜತ ವರ್ಷಾಚರಣೆ ಸಮಿತಿಯ ಎಲ್ಲ ಸದಸ್ಯರು ಹಾಗೂ ಸಭಾಸದರಿಗೆ ಮ್ಯಾನೇಜರ್ ಶ್ರೀಮತಿ ಜಯಾ ಅಬ್ರಹಾಂ ತುಂಬು ಹೃದಯದ ಗೌರವ ಅರ್ಪಿಸಿದರು. ಶ್ರೀಮತಿ ವತ್ಸಲಾ ಮೋಹನ್ ಕಾರ್ಯಕ್ರಮವನ್ನು ತುಂಬ ಅಚ್ಚುಕಟ್ಟಾಗಿ ನಿರೂಪಿಸಿದರು.

ಸಮಾರಂಭ ತುಂಬ ಸುಂದರವಾಗಿತ್ತು. ಗಣ್ಯರೆಲ್ಲರೂ ಅತ್ಯಂತ ಕರಾರುವಾಕ್ಕಾಗಿ ಮಾತನಾಡಿದರು. ಅವರ ಹಿತವಚನ ಅತ್ಯಂತ ಪ್ರಬುದ್ಧವಾಗಿತ್ತು. ಅದರಲ್ಲಿಯೂ ಸಚಿವೆ ಶೋಭಾ ಕರಂದ್ಲಾಜೆಯವರ ಭಾಷಣವಂತೂ ತುಂಬ ಸಮಯೋಚಿತವಾಗಿತ್ತು ಎಂಬ ಪ್ರಶಂಸೆ ಸಭಾಸದರಿಂದ ತಾನೆ ತಾನಾಗಿ ಹೊರ ಬೀಳುತ್ತಿತ್ತು. ಅವರ ಪ್ರಬುದ್ಧತೆಯನ್ನು ಎಲ್ಲರೂ ಮೆಚ್ಚಿಕೊಂಡರು.

ಸಮಾರಂಭ, ಭಾಷಣಗಳಂತೆ ವ್ಯವಸ್ಥೆಗೊಳಿಸಲಾಗಿದ್ದ ಕೈಯೂಟವೂ ರುಚಿಕಟ್ಟಾಗಿತ್ತು.

## ಅಭಿಮಾನದಿಂದಲ್ಲ...

(13ನೇ ಪುಟದಿಂದ)

ಅದರಲ್ಲಿಯೂ ಬೆಂಗಳೂರಿಗೆ ವಲಸೆ ಬರುವವರ ಪ್ರಮಾಣ ಎಲ್ಲೆಮೀರುತ್ತಿದೆ. ಕರ್ನಾಟಕಕ್ಕೆ ಬರುವವರು, ಬಂದವರು ಕನ್ನಡ ಕಲಿಯಲೇಬೇಕೆಂಬ ಪರಿಸ್ಥಿತಿ ಇಲ್ಲ. ಅವರಿಗೆ ನಮ್ಮ ಭಾಷೆ ಕಲಿಸುವ ಬದಲು ನಾವೇ ಅವರ ಭಾಷೆ ಕಲಿತು ಆ ಭಾಷೆಯಲ್ಲೇ ಮಾತನಾಡುತ್ತೇವೆ. ನಾವು ಎಲ್ಲರನ್ನೂ ಆನಂದದಿಂದ ಬರಮಾಡಿಕೊಳ್ಳುತ್ತಿದ್ದೇವೆ. ಇಲ್ಲಿ ಯಾರು ಬೇಕಾದರೂ ತಮಗಿಷ್ಟ ಬಂದಂತೆ ಬದುಕಬಹುದು. ತಮಗಿಷ್ಟ ಬಂದಡೆ ವಾಸಿಸಬಹುದು. ಆದರೆ ಕನ್ನಡವಷ್ಟೇ ಗೊತ್ತಿದ್ದರೆ ಜೀವನ ನಿರ್ವಹಣೆ ಕನ್ನಡಿಗರಿಗಷ್ಟೇ ಎನಿಸುತ್ತಿದೆ. ಕನ್ನಡಿಗರು ತಮ್ಮ ಉದರಾರಂಭಣಕ್ಕೆ ಕನ್ನಡದ ಜೊತೆಗೆ ಇಂಗ್ಲಿಷ್, ತಮಿಳು, ತೆಲುಗು ಕೊನೆಗೆ ಮಲೆಯಾಳ ಅಥವಾ ಉರ್ದು ಆದರೂ ಕಲಿಯಬೇಕಾಗಿದೆ.

ಬೆಂಗಳೂರು ಮಾತ್ರ ಕರ್ನಾಟಕವಲ್ಲ ಎಂಬವಾದವಿದೆ. ಆದರೆ ಅಕ್ಷರಸ್ಥ, ಅನಕ್ಷರಸ್ಥರಿಬ್ಬರೂ ತಮ್ಮ ಹೊಟ್ಟೆಪಾಡಿಗೆ ಬೆಂಗಳೂರನ್ನೇ ಆಶ್ರಯಿಸಬೇಕಾಗಿದೆ. ಇನ್ನು ಉದ್ಯೋಗಕ್ಕೆ ಇಂಗ್ಲಿಷ್ ಅನಿವಾರ್ಯ ಎಂಬ ಹಂತ ತಲುಪಿಬಿಟ್ಟಿದ್ದೇವೆ. ನಮ್ಮ ಮಕ್ಕಳಿಗೆ ಮಾತನಾಡಲೂ ಶುದ್ಧ ಕನ್ನಡ ಬರುವುದಿಲ್ಲ ಎಂದಾದ ಮೇಲೆ ಅವರು ಕನ್ನಡ ಸಾಹಿತ್ಯ ಓದುವದೆಲ್ಲಿ ಬಂತು. ಇಂಗ್ಲಿಷಿಗಿಂತ ಉತ್ತಮ ಸಾಹಿತ್ಯ ಕನ್ನಡದಲ್ಲಿದೆ ಎಂಬುದಾದರೂ ಅವರಿಗೆ ಹೇಗೆ ತಿಳಿಯಬೇಕು. ಬೂಕರ್ ಪ್ರಶಸ್ತಿ ಪಡೆದ ಅರೆಬರೆ ಕನ್ನಡಿಗ ಅರವಿಂದ ಅಡಿಗರೂ ಸಹ ನನ್ನ ಅಭಿಪ್ರಾಯ ವ್ಯಕ್ತಪಡಿಸಲು ಇಂಗ್ಲಿಷಿಗಿಂತ ಉತ್ತಮ ಭಾಷೆ ಇಲ್ಲ ಎಂದು ಹೇಳಿದ್ದಾರೆ. ಇಂಥವರೇ ಹೀಗೆಂದ ಮೇಲೆ ಉಳಿದವರ ಪಾಡೇನು?

ಉನ್ನತ ಹುದ್ದೆಯಲ್ಲಿರುವವರಿಗೆ ಕನ್ನಡದಲ್ಲಿ ಮಾತನಾಡುವದೆಂದರೇ ಕೀಳರಿಮೆ. ಇದು ಕನ್ನಡಿಗರಿಗೆ ಮಾತ್ರ ಅಂಟಿಕೊಂಡಿರುವ ಜಾಡ್ಯ. ಇನ್ನು ವಿಧಾನ ಸೌಧದಲ್ಲಿ ಕುಳಿತು ಕನ್ನಡವೇ ಅಧಿಕೃತ ಭಾಷೆ, ಕನ್ನಡದಲ್ಲೇ ವ್ಯವಹರಿಸಿ ಎಂದು ಸುತ್ತೋಲೆ ಕಳಿಸುವ ಅನೇಕ ಐ.ಎ.ಎಸ್. ಅಧಿಕಾರಿಗಳಿಗೆ ಕನ್ನಡದ ಗಂಧ-ಗಾಳಿಯೂ ಗೊತ್ತಿಲ್ಲ. ಶ್ರೀ ಸಾಮಾನ್ಯ ಇವರೊಡನೆ ವ್ಯವಹರಿಸಲು ಮಧ್ಯವರ್ತಿಯನ್ನು ಅವಲಂಬಿಸಬೇಕು.

ಅತ್ತ 'ಎಕ್ಕಡಾ' ಇತ್ತ 'ಎನ್ನಡಾ' ನಡುವೆ ಸೊರಗುತ್ತಿರುವ ಕನ್ನಡಕ್ಕೆ ಅತ್ತೂ ಕರೆದೂ ಔತಣಕ್ಕೆ ಕರೆಸಿಕೊಂಡಂತೆ ಕೊನೆಗೂ ಶಾಸ್ತ್ರೀಯ ಸ್ಥಾನ ದೊರೆಯಿತಲ್ಲ ಎಂದು ತೃಪ್ತಿ ಪಡಬೇಕಷ್ಟೇ.

**-ವೆಂಕಟನಾರಾಯಣ**

## ಶುಭವಿವಾಹ



'ಮಂಗಳ'ದ ಕೆ.ಆರ್. ನಗರದ ಏಜೆಂಟರಾದ ಚಿ. ಎ.ವಿ. ರವೀಂದ್ರ ಅವರ ವಿವಾಹವು ಚಿ. ಸೌ. ಹೆಚ್.ಎಸ್.ಗಿರಿಜಾ (ಅಂಬಿಕಾ) ಅವರೊಂದಿಗೆ ಇತ್ತೀಚೆಗೆ ನೆರವೇರಿತು.

ಸಂಜೆವಾಣಿ ಮಂಗಳವಾರ 2 ಡಿಸೆಂಬರ್ 2008




ವಿಶ್ವ ಏಡ್ಸ್ ದಿನಾಚರಣೆ ಅಂಗವಾಗಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಹಾಗೂ ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜ್ ಏರ್ಪಡಿಸಿದ್ದ ಏಡ್ಸ್ ಬಗ್ಗೆ ಜನ ಜಾಗೃತಿ ಜಾಥಾಗೆ ಖ್ಯಾತ ಇತಿಹಾಸ ತಜ್ಞ ಡಾ. ಸೂರ್ಯನಾಥ ಕಾಮತ್ ಚಾಲನೆ ನೀಡಿದರು. ರಾಜ್ಯ ರೆಡ್‌ಕ್ರಾಸ್ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ, ಪ್ರಸಿದ್ಧ ನೇತ್ರ ತಜ್ಞ ಡಾ. ಅಪ್ಪಾಜಿಗೌಡ, ರಾಜ್ಯ ರೆಡ್‌ಕ್ರಾಸ್ ಗೌರವ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಕಾಲೇಜಿನ ಪ್ರಾಂಶುಪಾಲ ಪ್ರೊ. ಎಂ.ಆರ್ ಶ್ರೀನಿವಾಸ್ ಹಾಗೂ ಇತರ ಗಣ್ಯರು ಉಪಸ್ಥಿತರಿದ್ದರು.



ಶೇಷಾದ್ರಿಪುರಂ ಸಂಜೆ ಪದವಿ ಪೂರ್ವ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ 53ನೆ ಕನ್ನಡ ರಾಜ್ಯೋತ್ಸವ ಸಮಾರಂಭದಲ್ಲಿ ಕನ್ನಡ ಪ್ರಾಧ್ಯಾಪಕ ಗೀತಾಚಾರ್ಯ, ಗೌ. ಕಾರ್ಯದರ್ಶಿ ವೂಡೇಪಿ ಕೃಷ್ಣ, ಪ್ರೊ. ಗಾಂಧಿ, ಡಿ. ಪ್ರಭು, ಆಡಳಿತ ಸಲಹಾ ಮಂಡಳಿ ಅಧ್ಯಕ್ಷ ಬಸವರಾಜನ್ ಮತ್ತಿತರರು ಈ ಸಂದರ್ಭದಲ್ಲಿ ಪಾಲ್ಗೊಂಡಿದ್ದರು.

ಬೆಂಗಳೂರು ವಿಜಯ | ಬುಧವಾರ 19 ನವೆಂಬರ್ 2008

2-DAY NATIONAL LEVEL SYMPOSIUM

New Frontiers of Literary Research

ಶೇಷಾದ್ರಿಪುರ ಕಾಲೇಜು ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿ ಆಯೋಜಿಸಿದ್ದ ಸಾಹಿತ್ಯ ಸಂಶೋಧನೆಯ ಹೊಸ ಎಲೆಗಳು ಕುರಿತ ಎರಡು ದಿನಗಳ ರಾಷ್ಟ್ರ ಮಟ್ಟದ ವಿಚಾರ ಸಂಕಿರಣದಲ್ಲಿ ಸಾಹಿತಿ ಯು ಆರ್. ಅನಂತಮೂರ್ತಿ, ಪ್ರಿನ್ಸಿಪಾಲ್ ಡಾ. ವರಹಳ್ಳಿ ಬಾಲಸುಬ್ರಹ್ಮಣ್ಯ, ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ವಿಮರ್ಶಕ ಡಾ. ಸಿ.ಎನ್. ರಾಮಚಂದ್ರನ್, ಕೇಂದ್ರ ಸಾಹಿತ್ಯ ಅಕಾಡೆಮಿ ಕಾರ್ಯದರ್ಶಿ ಅಗ್ರಹಾರ ಕೃಷ್ಣಮೂರ್ತಿ ಉಪಸ್ಥಿತರಿದ್ದರು.

ಈ ಸಂಜೆ

[illegible] 18 [illegible] 2008



ಸಾರ್ವಜನಿಕ ಶಿಕ್ಷಣ ಇಲಾಖೆ, ಸರ್ವ ಶಿಕ್ಷಣ ಅಭಿಯಾನ ಹಾಗೂ ಭಾರತ ಸೇವಾದಳ ಕೇಂದ್ರ ಸಮಿತಿ ಡಿಸೆಂಬರ್‌ನಲ್ಲಿ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಹಮ್ಮಿಕೊಂಡಿರುವ ಶಿಕ್ಷಣ ತರಬೇತಿ ಶಿಬಿರಗಳನ್ನು ವಿಡಿಯೋ ಕಾನ್ಫರೆನ್ಸ್ ಮೂಲಕ ಸಚಿವ ವಿಶ್ವೇಶ್ವರ ಹೆಗಡೆ ಕಾಗೇರಿ ಉದ್ಘಾಟಿಸಿದರು. ವೂಡೆ.ಪಿ ಕೃಷ್ಣ, ಬಿ.ಸಿ. ವೆಂಕಟೇಶ್, ಮಹೇಶ್‌ಗೌಡ, ಸೈಯದ್ ಕಲಂದರ್ ಪಾಲ್ಗೊಂಡಿದ್ದರು.

ಬೆಂಗಳೂರು ವಿಜಯ | ಸೋಮವಾರ, 17 ನವೆಂಬರ್ 2008

ಉಪನಗರ

# ವಿದ್ಯಾರ್ಥಿಗಳಲ್ಲಿ ಬೌದ್ಧಿಕ ಚಿಂತನೆ ಅಗತ್ಯ

ಯಲಹಂಕ: ಇತ್ತೀಚೆಗೆ ಜ್ಞಾನದ ದುರುಪಯೋಗವಾಗುತ್ತಿದೆ ಎಂದು ಸಾಹಿತಿ ಹಾಗೂ ವಿಧಾನಪರಿಷತ್ ಸದಸ್ಯ ಡಾ. ದೊಡ್ಡರಂಗೇಗೌಡ ವಿಷಾದಿಸಿದರು.

ಮಕ್ಕಳ ದಿನಾಚರಣೆ ಅಂಗವಾಗಿ ಇಲ್ಲಿನ ಶೇಷಾದ್ರಿಪುರಂ ವಿದ್ಯಾಸಂಸ್ಥೆಯಲ್ಲಿ ಹಮ್ಮಿಕೊಂಡಿದ್ದ ಸ್ನೇಹ ಸಮ್ಮಿಲನ ಕಾರ್ಯಕ್ರಮದಲ್ಲಿ ಮಾತನಾಡಿ, ಇಂದು ಉನ್ನತ ವಿದ್ಯಾಭ್ಯಾಸ ಮಾಡಿದವರೇ ಭಯೋತ್ಪಾದಕರಾಗಿದ್ದಾರೆ. ಇದು ನಮ್ಮ ನಾಡಿನ ದುರಂತ ಎಂದು ಆತಂಕ ವ್ಯಕ್ತಪಡಿಸಿದರು. ಶಿಕ್ಷಕರು ವಿದ್ಯಾರ್ಥಿಗಳಲ್ಲಿ ಬೌದ್ಧಿಕ ಚಿಂತನೆ ಬೆಳೆಸಬೇಕು. ಅವರಿಗೆ ನೈತಿಕ ಮೌಲ್ಯಗಳನ್ನು ತಲುಪಿಸಬೇಕು ಎಂದು ಹೇಳಿದರು.

ನಮ್ಮದು ಪ್ರಜಾಪ್ರಭುತ್ವ ರಾಷ್ಟ್ರ ಎಂದು ಸಂವಿಧಾನದಲ್ಲಿ ಮಾತ್ರ ಇದೆ. ಆದರೆ ವೈಯಕ್ತಿಕ ಜೀವನದಲ್ಲಿ ಸಮಾನತೆ ಎಂಬುದೇ ಇಲ್ಲ ಎಂದು ಖೇದ ವ್ಯಕ್ತಪಡಿಸಿದರು.

ಕಾರ್ಯಕ್ರಮ ಉದ್ಘಾಟಿಸಿದ ಕರ್ನಾಟಕ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಹಾಗೂ ಎಐಸಿಟಿಇ ಮಾಜಿ ಅಧ್ಯಕ್ಷ ಡಾ. ಎಸ್. ರಾಮೇಗೌಡ ಮಾತನಾಡಿ, ವಿದ್ಯಾರ್ಥಿಗಳು ಆತ್ಮಸ್ಥೈರ್ಯ, ಏಕಾಗ್ರತೆ, ತನ್ಮಯತೆಯಿಂದ ವಿಷಯಗಳನ್ನು ತಿಳಿದು ಜ್ಞಾನ ಬೆಳೆಸಿಕೊಳ್ಳಬೇಕೆಂದು ಕರೆ ನೀಡಿದರು.

ಕರ್ನಾಟಕ ಆಡಳಿತಾತ್ಮಕ ನ್ಯಾಯಪೀಠದ ಸದಸ್ಯರಾದ ಟಿ.ಎನ್. ಮಂಜುಳಾದೇವಿ ಮಾತನಾಡಿದರು. ಬಂಡ್ಲಹಳ್ಳಿ ವಿಜಯಕುಮಾರ್ ಮತ್ತು ತಂಡದವರಿಂದ ಸುಗಮ ಸಂಗೀತ, ಮಾಸ್ಟರ್ ಹಿರಣ್ಣಯ್ಯ ಮತ್ತು ತಂಡದವರಿಂದ ಹಾಸ್ಯ ಕಾರ್ಯಕ್ರಮ, ಶಿಕ್ಷಕರಿಗೆ ಸೇವಾ ಪ್ರಶಸ್ತಿ ಪ್ರದಾನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ಕೃಷ್ಣ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ,



**ಯಲಹಂಕದ ಶೇಷಾದ್ರಿಪುರಂ ವಿದ್ಯಾಸಂಸ್ಥೆಯಲ್ಲಿ ಸ್ನೇಹ ಮಿಲನ ಕಾರ್ಯಕ್ರಮವನ್ನು ಕರ್ನಾಟಕ ವಿವಿಯ ವಿಶ್ರಾಂತ ಕುಲಪತಿ ಡಾ. ಎಸ್. ರಾಮೇಗೌಡ ಉದ್ಘಾಟಿಸಿದರು. ವಿಧಾನ ಪರಿಷತ್ ಸದಸ್ಯ ಡಾ. ದೊಡ್ಡರಂಗೇಗೌಡ, ಟಿ.ಎನ್. ಮಂಜುಳಾದೇವಿ, ಕೃಷ್ಣ ಹಾಜರಿದ್ದರು.**

ಉಪಾಧ್ಯಕ್ಷ ಟಿ.ಎಸ್. ಹೆಂಜಾರಪ್ಪ, ಕೋಶಾಧ್ಯಕ್ಷರಾದ ಬಿ.ಎಂ. ಪಾರ್ಥ ಡಬ್ಲ್ಯು.ಎಚ್. ಅನಿಲ್‌ಕುಮಾರ್, ಸಾರಥಿ, ಗೌರವ ಸಹಾಯಕ ಗೌರವ ಜಂಟಿ ಕಾರ್ಯ ದರ್ಶಿ ಕಾರ್ಯದರ್ಶಿ ಸರೋಜಾ ಕೆ.ಎಂ. ಎ.ಆರ್. ಶ್ರೀನಿವಾಸಯ್ಯ, ಗೌರವ ನಂಜಪ್ಪ ಹಾಜರಿದ್ದರು.

ಬೆಂಗಳೂರು ವಿಜಯ | ಬುಧವಾರ, 12 ನವೆಂಬರ್ 2008



ಶೇಷಾದ್ರಿಪುರಂ ಸ್ತ್ರೀ ಸಮಾಜ ಮಾಧ್ಯಮಿಕ ಶಾಲೆ ಏರ್ಪಡಿಸಿದ್ದ ಡಾ. ಜಿ.ಪಿ. ರಾಜರತ್ನಂ ಸ್ಮರಣಾರ್ಥ ಅಂತರ್ ಶಾಲಾ ನಾಟಕ ಮತ್ತು ಸಮೂಹ ಗಾಯನ ಸ್ಪರ್ಧೆಯನ್ನು ಕಾಲೇಜು ಶಿಕ್ಷಣ ಇಲಾಖೆ ನಿರ್ದೇಶಕಿ ಡಾ. ಶಾಂತಲಕ್ಷ್ಮಿ ಉದ್ಘಾಟಿಸಿದರು. ಶೇಷಾದ್ರಿಪುರಂ ಸಮೂಹ ಶಿಕ್ಷಣ ಸಂಸ್ಥೆ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಶಾಲಾ ಅಭಿವೃದ್ಧಿ ಸಮಿತಿ ಸದಸ್ಯ ಬಿ.ವಿ.ಎಸ್. ರಾವ್, ಮುಖ್ಯೋಪಾಧ್ಯಾಯಿನಿ ಎಂ. ಗೀತಾ ಉಪಸ್ಥಿತರಿದ್ದರು.



ಬೆಂಗಳೂರಿನಲ್ಲಿ ಮಂಗಳವಾರ ಏರ್ಪಡಿಸಿದ್ದ ಸಾಹಿತ್ಯ ಸಂಶೋಧನೆ ಕುರಿತ ವಿಚಾರ ಸಂಕಿರಣದಲ್ಲಿ ಜ್ಞಾನಪೀಠ ಪುರಸ್ಕೃತ ಸಾಹಿತಿ ಡಾ. ಯು.ಆರ್. ಅನಂತಮೂರ್ತಿ, ವಿಮರ್ಶಕ ಡಾ.ಸಿ.ಎನ್. ರಾಮಚಂದ್ರನ್, ಕೇಂದ್ರ ಸಾಹಿತ್ಯ ಅಕಾಡೆಮಿ ಕಾರ್ಯದರ್ಶಿ ಅಗ್ರಹಾರ ಕೃಷ್ಣಮೂರ್ತಿ, ವೊಡೆ ಕೃಷ್ಣ ಪಾಲ್ಗೊಂಡಿದ್ದರು.

ಪ್ರಜಾವಾಣಿ ಬುಧವಾರ 12ನೇ ನವೆಂಬರ್ 2008

# ಜನಪ್ರಿಯತೆಗೆ ಸಂಶೋಧನೆ ಸಲ್ಲ

ಪ್ರಜಾವಾಣಿ ವಾರ್ತೆ



ಶೇಷಾದ್ರಿಪುರ ಕಾಲೇಜು ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿ ಜಂಟಿಯಾಗಿ ಸೆಂಟ್ರಲ್ ಕಾಲೇಜಿನ ಜ್ಞಾನಜ್ಯೋತಿ ಸಭಾಂಗಣದಲ್ಲಿ ಮಂಗಳವಾರ ಏರ್ಪಡಿಸಿದ್ದ 'ಸಾಹಿತ್ಯಿಕ ಅಧ್ಯಯನದ ಹೊಸ ಆಯಾಮಗಳು' ಕುರಿತ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಸಾಹಿತಿ ಡಾ. ಯು.ಆರ್.ಅನಂತಮೂರ್ತಿ, ವಿಮರ್ಶಕ ಡಾ. ಸಿ.ಎಸ್. ರಾಮಚಂದ್ರನ್, ಅಕಾಡೆಮಿ ಕಾರ್ಯದರ್ಶಿ ಅಗ್ರಹಾರ ಕೃಷ್ಣಮೂರ್ತಿ ಪಾಲ್ಗೊಂಡಿದ್ದರು.

ಬೆಂಗಳೂರು: 'ಕೇವಲ ಫ್ಯಾಷನ್, ಅಗ್ಗದ ಜನಪ್ರಿಯತೆಗಾಗಿ ಸಂಶೋಧನೆ, ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಬಾರದು. ಅರ್ಥಪೂರ್ಣವಾದ ಸಂಶೋಧನೆಯಲ್ಲಿ ತೊಡಗಿದಾಗ ಮಾತ್ರ ಉತ್ತಮ ಗ್ರಂಥಗಳು ಹೊರಬರಲು ಸಾಧ್ಯ' ಎಂದು ಸಾಹಿತಿ ಡಾ. ಯು.ಆರ್.ಅನಂತಮೂರ್ತಿ ಅಭಿಪ್ರಾಯಪಟ್ಟರು.

ಶೇಷಾದ್ರಿಪುರಂ ಕಾಲೇಜು, ಕೇಂದ್ರ ಸಾಹಿತ್ಯ ಅಕಾಡೆಮಿಯ ಸಹಯೋಗದೊಂದಿಗೆ ಮಂಗಳವಾರ ಇಲ್ಲಿ ಏರ್ಪಡಿಸಿದ್ದ 'ಸಾಹಿತ್ಯಿಕ ಅಧ್ಯಯನದ ಹೊಸ ಆಯಾಮಗಳು' ಕುರಿತ ರಾಷ್ಟ್ರೀಯ ವಿಚಾರ ಸಂಕಿರಣ ಉದ್ಘಾಟಿಸಿ ಮಾತನಾಡಿದ ಅವರು, ಸಾಹಿತ್ಯ ಕ್ಷೇತ್ರದಲ್ಲಿ ಸಂಶೋಧನೆಗೆ ಸಾಕಷ್ಟು ಅವಕಾಶಗಳಿವೆ ಎಂದು ನುಡಿದರು.

ಹಿಂದೆ ಸಾಹಿತ್ಯ, ತತ್ವಶಾಸ್ತ್ರ ಒಂದೇ ಆಗಿತ್ತು, ಆದರೆ ಈಗ ಇವೆರಡನ್ನೂ ಪ್ರತ್ಯೇಕವಾಗಿಯೇ ನೋಡಲಾಗುತ್ತಿದೆ. ಸಾಹಿತ್ಯ ಮನರಂಜನೆ ನೀಡುವಂತಹದ್ದಲ್ಲ, ಜ್ಞಾನದ ವಿಕಾಸವನ್ನು ಬಯಸುವಂತಹವರು ಇದನ್ನು ಗಂಭೀರವಾಗಿ ತೆಗೆದುಕೊಳ್ಳಬೇಕಾಗುತ್ತದೆ ಎಂದರು.

ವಿಮರ್ಶಕ ಡಾ. ಸಿ.ಎಸ್.ರಾಮಚಂದ್ರನ್ ಮಾತನಾಡಿ, ಸಂಶೋಧನೆಗಳು ನಮ್ಮ ಅನುಭವಕ್ಕೆ ಹತ್ತಿರವಾಗಿರಬೇಕು. ಬೆಳವಣಿಗೆಗೆ ಪೂರಕವಾಗಿರಬೇಕು ಎಂದರು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಅಧ್ಯಕ್ಷತೆ ವಹಿಸಿದ್ದರು. ಕೇಂದ್ರ ಸಾಹಿತ್ಯ ಅಕಾಡೆಮಿ ಕಾರ್ಯದರ್ಶಿ ಅಗ್ರಹಾರ ಕೃಷ್ಣಮೂರ್ತಿ, ಅಕಾಡೆಮಿಯ ಪ್ರಾದೇಶಿಕ ಕಾರ್ಯದರ್ಶಿ ಎ.ಎಸ್.ಇಳಂಗೋವನ್ ಹಾಜರಿದ್ದರು.



# ಬೆಂಗಳೂರು ಇತಿಹಾಸ ಮಾಲೆ

■ ಸುರೇಶ್ ಮೂನ sureshmoona@gmail.com

ಬೆಂಗಳೂರಿನ ಹೆಮ್ಮೆಯ ಸಂಸ್ಥೆ: ಶೇಷಾದ್ರಿಪುರಂ ಶಿಕ್ಷಣ ದತ್ತಿ

## ಆದರ್ಶ ಶಿಕ್ಷಣ ದತ್ತಿ



ದತ್ತಿಯ ಸಭಾಂಗಣ

ಶೇಷಾದ್ರಿಪುರಂ ಕಾಲೇಜಿನ ಕನ್ನಡ ಸಂಘ ಕೇವಲ ಸಾಹಿತ್ಯ ಕೃತಿಗಳ ಪ್ರಕಟಣೆಗಷ್ಟೇ ತನ್ನನ್ನು ಸೀಮಿತಗೊಳಿಸಿಕೊಳ್ಳಲಿಲ್ಲ. ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತಹ ಕೃತಿಯನ್ನೂ ಹೊರತಂದಿದೆ. ಒಮ್ಮೆ ಪರೀಕ್ಷಾ ಪದ್ಧತಿಯ ಬಗ್ಗೆ ವಿವಾದ ಉಂಟಾದಾಗ ಪರೀಕ್ಷೆಗಳನ್ನು ಎದುರಿಸುವ ವಿದ್ಯಾರ್ಥಿಗಳಲ್ಲೂ ಈ ಬಗ್ಗೆ ಅರಿವು ಮೂಡಿಸಿ ಅವರಿಂದ ಒಂದು ಪ್ರಬಂಧವನ್ನು ಬರೆಸಿ ಕಾಲೇಜಿನ ವಾರ್ಷಿಕ ಸಂಚಿಕೆಯಲ್ಲಿ ಪ್ರಕಟಿಸಬಹುದೆಂದು ಆಗಿನ ಪ್ರಾಂಶುಪಾಲರಾಗಿದ್ದ ಪ್ರೊ| ಕೆ.ಇ. ರಾಧಾಕೃಷ್ಣ ಅವರಿಗೆ ಡಾ| ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು ಸೂಚಿಸಿದ್ದರು. ಇದಕ್ಕೊಪ್ಪಿದ ಅವರು, ಆಗ ಬಳಕೆಯಲ್ಲಿದ್ದ ಪರೀಕ್ಷಾ ಕ್ರಮದ ಸಮೀಕ್ಷೆಯನ್ನು ನಡೆಸಲು ವಿದ್ಯಾರ್ಥಿಗಳ ಒಂದು ತಂಡಕ್ಕೆ ಸೂಚಿಸಿದರು. ಸಿ.ಎ.ರಮೇಶ್, ಅಮೃತ ಆರ್. ಮಹೆಂದಳೆ, ಎಂ.ಜಿ.ರವಿದರ್ಶನ್, ವೃಂದಾ, ಆರ್. ಚಂದ್ರಿಕಾ ಈ ವಿದ್ಯಾರ್ಥಿಗಳ ತಂಡ ಈ ನಿಟ್ಟಿನಲ್ಲಿ ಕಾರ್ಯನಿರತವಾಯಿತು. ಬೆಂಗಳೂರು ವಿವಿದ ಪ್ರೊ| ರಂಗಾ, ಡಾ| ತಿಮ್ಮಪ್ಪ, ಸೆಂಟ್ರಲ್ ಲಾ ಕಾಲೇಜಿನ ಪ್ರಾಂಶುಪಾಲರಾಗಿದ್ದ ಡಾ| ಕುಟಿನ್ಹೊ, ಎಂ.ಇ.ಎಸ್. ಕಾಲೇಜಿನ ಸಮಾಜ ಶಾಸ್ತ್ರ ವಿಭಾಗದ ಭಾರತಿ ಪರೇಖ್ ಹಾಗು ಅದೇ ಕಾಲೇಜಿನ ಇನ್ನೂ ಕೆಲವು ಅಧ್ಯಾಪಕರು ಹಾಗು ಇನ್ನಿತರ ವಿದ್ಯಾರ್ಥಿಗಳನ್ನು ಭೇಟಿ ಮಾಡಿ ಈ ತಂಡದವರು ಅಭಿಪ್ರಾಯಗಳನ್ನು ಪಡೆದರು.

ಇವೆಲ್ಲವನ್ನೂ ಭಟ್ಟಿ ಇಳಿಸಿ ಬರೆದಾಗ ಒಂದು ದೀರ್ಘ ಲೇಖನವೇ ಆಯಿತು. ಆಗ ಕನ್ನಡ ಸಂಘ ಇದನ್ನು ಒಂದು ಕಿರು ಪುಸ್ತಕದ ರೂಪದಲ್ಲಿ ಹೊರತಂದಿತು. ಪರಿಸ್ಥಿತಿಗಳು ಬದಲಾಗಿದ್ದರೂ ಈ ಕಿರುಹೊತ್ತಿಗೆ ಇಂದಿಗೂ ನಮ್ಮಲ್ಲಿರುವ ಪರೀಕ್ಷಾ ಪದ್ಧತಿಯ ಬಗ್ಗೆ ಓದುಗರನ್ನು ಆಲೋಚನೆಗೊಳಪಡಿಸುತ್ತದೆ. ಹೀಗೆ ಕನ್ನಡ ಸಂಘವು 24 ಕೃತಿಗಳನ್ನು ಪ್ರಕಟಿಸಿತು. ಪ್ರಾರಂಭದಲ್ಲಿ, ಬಂಡವಾಳ ಹಾಕಿ ಹೊರತಂದ ಪುಸ್ತಕದ ಪ್ರತಿಗಳನ್ನು ಮಾರಿ ಅದರಿಂದ ಬಂದ ಹಣವನ್ನೇ ಇನ್ನೊಂದು ಪ್ರಕಟಣೆಗೆ ತೊಡಗಿಸುವುದು. ಈ ಕ್ರಮವನ್ನು ಅನುಸರಿಸಿದ್ದುದ್ದಕ್ಕಾಗಿ ಹಣಕ್ಕಾಗಿ ಯಾರ ಬಳಿಯೂ ಕೈಚಾಚುವ ಪರಿಸ್ಥಿತಿ ಈ ಸಂಘಕ್ಕೆ ಬರಲಿಲ್ಲ. ಕನ್ನಡಕ್ಕೆ ಶಾಸ್ತ್ರೀಯ ಸ್ಥಾನ ದೊರೆತಿರುವದರಿಂದ ಇನ್ನು ಮುಂದೆ ಕನ್ನಡ ಭಾಷೆ, ಸಾಹಿತ್ಯದ ಅಧ್ಯಯನ, ಬರಹ, ಪ್ರಕಟಣೆ ಮುಂತಾದ ಕಾರ್ಯಗಳಿಗೆ ಮತ್ತಷ್ಟು ಅವಕಾಶಗಳು ದೊರಕುವ ಸಾಧ್ಯತೆಗಳು ಇವೆ. ಇಂತಹ ಸಂದರ್ಭಗಳನ್ನು

> ಕಾಲೇಜುಗಳು ಉದಯೋನ್ಮುಖ ಬರಹಗಾರರ ಕೃತಿಗಳನ್ನು ಹೊರತರುವ ಕಾರ್ಯದಲ್ಲಿ ತೊಡಗಿದ್ದರೆ, ಈ ನಿಟ್ಟಿನಲ್ಲಿ ಯತ್ನಿಸುವವರಿಗೆ ಶೇಷಾದ್ರಿಪುರಂ ಕಾಲೇಜು ಕನ್ನಡ ಸಂಘದಂತಹ ಸಂಘಟನೆಗಳು ಮಾದರಿಯಾಗಬಲ್ಲವು. ಜೊತೆಗೆ ಹಲವಾರು ಸಾಹಿತ್ಯ ಮತ್ತಿತರ ವಿಷಯಗಳಿಗೆ ಸಂಬಂಧಿಸಿದ ವಿಚಾರ ಸಂಕಿರಣ, ಉಪನ್ಯಾಸ ಮುಂತಾದ ಕಾರ್ಯಕ್ರಮಗಳನ್ನು ಏರ್ಪಡಿಸಿ ಅದರಲ್ಲಿ ವಿದ್ಯಾರ್ಥಿಗಳಷ್ಟೇ ಅಲ್ಲದೆ ಅವರ ಪೋಷಕರೂ, ಸಾರ್ವಜನಿಕರೂ ಸಕ್ರಿಯವಾಗಿ ಭಾಗವಹಿಸಲು ಅನುವು ಮಾಡಿಕೊಟ್ಟಿದೆ.

ಉಪಯೋಗಿಸಿಕೊಂಡು ಕಾಲೇಜುಗಳು ಉದಯೋನ್ಮುಖ ಬರಹಗಾರರ ಕೃತಿಗಳನ್ನು ಹೊರತರುವ ಕಾರ್ಯದಲ್ಲಿ ತೊಡಗಿದರೆ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಪ್ರತಿಭಾವಂತ ಬರಹಗಾರರ ಒಂದು ಪೀಳಿಗೆಯನ್ನೇ ರೂಪಿಸಿಕೊಡಲು ಸಾಧ್ಯವಾಗುತ್ತದೆ. ಈ ನಿಟ್ಟಿನಲ್ಲಿ ಯತ್ನಿಸುವವರಿಗೆ ಶೇಷಾದ್ರಿಪುರಂ ಕಾಲೇಜು ಕನ್ನಡ ಸಂಘದಂತಹ ಸಂಘಟನೆಗಳು ಮಾದರಿಯಾಗಬಲ್ಲವು.

ಈ ಸಂಘವು ಪ್ರಕಟಣಾ ಕಾರ್ಯದಲ್ಲಿ ತೊಡಗುವುದರ ಜೊತೆಜೊತೆಗೆ ಹಲವಾರು ಸಾಹಿತ್ಯ ಮತ್ತಿತರ ವಿಷಯಗಳಿಗೆ ಸಂಬಂಧಿಸಿದ ವಿಚಾರ ಸಂಕಿರಣ, ಉಪನ್ಯಾಸ ಮುಂತಾದ ಕಾರ್ಯಕ್ರಮಗಳನ್ನು ಏರ್ಪಡಿಸಿ ಅದರಲ್ಲಿ ವಿದ್ಯಾರ್ಥಿಗಳಷ್ಟೇ ಅಲ್ಲದೆ ಅವರ ಪೋಷಕರೂ, ಸಾರ್ವಜನಿಕರೂ ಸಕ್ರಿಯವಾಗಿ ಭಾಗವಹಿಸಲು ಅನುವು ಮಾಡಿಕೊಟ್ಟಿದೆ. ಒಟ್ಟಿನಲ್ಲಿ ಕನ್ನಡ ಸಂಘವೊಂದು ತನ್ನ ಕಾಲೇಜಿನ ಗೌರವ ಹಾಗು ಕೀರ್ತಿಯನ್ನು ವೃದ್ಧಿಸುವಲ್ಲಿ ಏನೆಲ್ಲಾ ರಚನಾತ್ಮಕ ಕಾರ್ಯಗಳಲ್ಲಿ ತೊಡಗಬಹುದು ಎನ್ನವುದನ್ನು ಶೇಷಾದ್ರಿಪುರಂ ಕಾಲೇಜು ಕನ್ನಡ ಸಂಘವು ತೋರಿಸಿಕೊಟ್ಟಿದೆ.

ಹೀಗೆ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಎಲ್ಲಾ ಶಿಕ್ಷಣ ಸಂಸ್ಥೆಗಳು ಗುಣಮಟ್ಟದ ವಿದ್ಯೆಯನ್ನು ತಮ್ಮ ವಿದ್ಯಾರ್ಥಿಗಳಿಗೆ ನೀಡುತ್ತಿರುವುದರ ಜೊತೆಜೊತೆಗೆ ಒಂದಲ್ಲ ಒಂದು ರೀತಿಯಲ್ಲಿ ವಿಭಿನ್ನ ಹಾಗು ವಿಶೀಷ್ಟ ರೀತಿಯ ಯೋಜನೆಗಳಲ್ಲೂ ತೊಡಗಿರುತ್ತವೆ. ತಮ್ಮ ಸಂಸ್ಥೆಯ ಒಟ್ಟಾರೆ ಸ್ವರೂಪದ ಬಗ್ಗೆ ಕಾರ್ಯದರ್ಶಿಗಳಾದ ವೂಡೆ ಪಿ.ಕೃಷ್ಣ ಅವರು ಹೀಗೆ ಹೇಳುತ್ತಾರೆ. 'ನಮ್ಮ ಶಿಕ್ಷಣ ದತ್ತಿ ಕೇವಲ ಶಿಕ್ಷಣ ಸಂಸ್ಥೆಗಳನ್ನು ನಡೆಸುವ ಒಂದು ಮಂಡಳಿಯಷ್ಟೇ ಆಗಿರದೆ, ಬೃಹತ್ತಾದ ಒಂದು ಅವಿಭಕ್ತ ಕುಟುಂಬದಂತಿದೆ. ಇಲ್ಲಿರುವವರೆಲ್ಲರೂ ಶ್ರಮವಹಿಸಿ ಕಾರ್ಯೋನ್ಮುಖರಾಗಿ ಸಂಸ್ಥೆಯ ಕೀರ್ತಿಯನ್ನು ಹೆಚ್ಚಿಸಿದ್ದಾರೆ. ಅವರ ಯೋಗ ಕ್ಷೇಮವನ್ನು ನೋಡಿಕೊಳ್ಳುವುದು ನಮ್ಮ ದತ್ತಿಗೆ ಅತ್ಯಂತ ಮಹತ್ವದ ಸಂಗತಿಯೇ. ಆದುದರಿಂದಲೇ ಅವರಿಗೆ ಪ್ರತಿ ವರ್ಷವೂ ಭಾರತೀಯ ರೆಡ್‌ಕ್ರಾಸ್ ವತಿಯಿಂದ ಆರೋಗ್ಯ ತಪಾಸಣೆ ಮಾಡಿಸುತ್ತೇವೆ.

ಕಾರ್ಯಾಲಯ ಸಿಬ್ಬಂದಿಯ ಎಲ್ಲರಿಗೂ ಕಚೇರಿಯ ನಿರ್ವಹಣೆಯ ಬಗ್ಗೆ ತಜ್ಞರನ್ನು ಕರೆಸಿ ಮಾರ್ಗದರ್ಶನ ನೀಡಿಸುತ್ತೇವೆ. ವರ್ಷದಲ್ಲಿ ಒಂದು ದಿನ ನಮ್ಮ ಎಲ್ಲಾ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವವರೂ ಯಾವ ವರ್ಗ ಭೇದವಿಲ್ಲದೆ ಒಂದೇ ಸೂರಿನಡಿ ಸೇರುತ್ತಾರೆ. ಅಲ್ಲಿ ಮನೆಗಳಲ್ಲಿರು ವಂತೆ ಹಬ್ಬದ ಸಡಗರ, ಸಂಭ್ರಮಗಳಿರುತ್ತವೆ, ನಿವೃತ್ತಿ ಹೊಂದಿದವರು, ಸಾಧನೆ ಮಾಡಿದವರು ಮುಂತಾದವರನ್ನು ದತ್ತಿಯು ಗೌರವದಿಂದ ಪಾರಂಪರಿಕ ಶೈಲಿಯಲ್ಲಿ ಸತ್ಕರಿಸುತ್ತದೆ. ನಂತರ ಎಲ್ಲರೂ ಒಟ್ಟಿಗೆ ಭೋಜನ ಮಾಡುತ್ತಾರೆ.

ಇನ್ನು ನಮ್ಮ ಮುಂದಿನ ಯೋಜನೆಯೆಂದರೆ ಪಿ.ಹೆಚ್.ಡಿ ಅಧ್ಯಯನ ಕೇಂದ್ರವನ್ನು ಪ್ರಾರಂಭಿಸುವುದು. ಇದಕ್ಕೆ ಅನುಮತಿಯೂ ಈಗಾಗಲೇ ದೊರಕಿದೆ. ಮುಂದಿನ ಶೈಕ್ಷಣಿಕ ವರ್ಷದಿಂದ ಯಲಹಂಕದ ಕೇಂದ್ರದಲ್ಲಿ ನಮ್ಮ 25ನೇ ಸಂಸ್ಥೆಯಾಗಿ ಇದು ಕಾರ್ಯಾರಂಭ ಮಾಡಲಿದೆ. ನಮ್ಮ ದತ್ತಿಯ ಶಿಕ್ಷಣ ಸೇವೆಯನ್ನು ಬೆಂಗಳೂರು ನಗರಕ್ಕಷ್ಟೇ ಸೀಮಿತಗೊಳಿಸದೆ ನಮ್ಮ ರಾಜ್ಯದ ಇತರ ಕೆಲವು ಪ್ರದೇಶಗಳ ಜನಸಾಮಾನ್ಯರಿಗೂ ತಲುಪಿಸುವ ಉದ್ದೇಶದಿಂದ ತುಮಕೂರು, ಮೈಸೂರು, ಮಂಡ್ಯದಂತಹ ಸ್ಥಳಗಳಲ್ಲೂ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಲು ಪ್ರಯತ್ನ ನಡೆದಿವೆ. ದಿ ಲಾರ್ಜೆಸ್ಟ್ ಗುಡ್ ಆಫ್ ದಿ ಲಾರ್ಜೆಸ್ಟ್ ನಂಬರ್ಸ್ ಇದು ನಮ್ಮ ಶಿಕ್ಷಣ ದತ್ತಿಯ ಧ್ಯೇಯ. ಒಟ್ಟಿನಲ್ಲಿ ಹೊಸದಾಗಿ ಶಿಕ್ಷಣ ಸಂಸ್ಥೆಯನ್ನು ನಡೆಸುವವರಿಗಂತೂ ಇದೊಂದು ಆದರ್ಶ ಶಿಕ್ಷಣ ದತ್ತಿಯಾಗಿದೆ'.

■ ಮುಗಿಯಿತು

### ತಿದ್ದುಪಡಿ

ನ. 4, 2008ರ ಅಂಕಣದಲ್ಲಿ 'ಆಗ ಕಾಲೇಜಿನಲ್ಲಿ ಭರಮಯ್ಯ ಎನ್ನುವರು ಪ್ರಾಂಶುಪಾಲರಾಗಿದ್ದರು' ಎಂಬ ವಾಕ್ಯದಲ್ಲಿ ಭರಮಯ್ಯ ಬದಲಾಗಿ ವಿ.ವೈ. ಸೋಮಯಾಜುಲು ಎಂದೂ, ಚಿತ್ರದ ಅಡಿಬರಹ ಶತಮಾನದ ಹಿರಿಯರು ಬದಲಾಗಿ 'ಕನ್ನಡ ಸಂಘದ ಪ್ರಕಟಣೆಗಳು' ಎಂದಿರಬೇಕು.

ಸಂಯುಕ್ತ ಕರ್ನಾಟಕ 20-11-2008

Sahitya Akademi
2-DAY NATIONAL LEVEL SYMPOSIUM
New Frontiers of Literary Research
Seminar Hall, Jnana Jyothi Auditorium, Central College, Bangalore

ಶೇಷಾದ್ರಿಪುರಂ ಕಾಲೇಜು, ಕೇಂದ್ರ ಸಾಹಿತ್ಯ ಅಕಾಡೆಮಿ ಸಹಯೋಗದೊಂದಿಗೆ ಆಯೋಜಿಸಿದ್ದ ಡು ದಿನಗಳ ರಾಷ್ಟ್ರ ಮಟ್ಟದ ವಿಚಾರ ಸಂಕೀರ್ಣದಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಕಾರ್ಯದರ್ಶಿ ಹಾರ ಕೃಷ್ಣಮೂರ್ತಿ, ಸಂಸ್ಥೆಯ ಕಾರ್ಯದರ್ಶಿ ವೂಡೇ ಪಿ ಕೃಷ್ಣ, ಡಾ.ನರಹಳ್ಳಿ ಬಾಲಸುಬ್ರಮಣ್ಯಂ ಸ್ಥಿತರಿದ್ದರು.

ಮಂಗಳವಾರ 11 ನವೆಂಬರ್ 2008 ಬೆಂಗಳೂರು ಪ್ರಜಾವಾಣಿ



ಬೆಂಗಳೂರಿನಲ್ಲಿಂದು ಆಯೋಜಿಸಲಾಗಿದ್ದ ಸಾಹಿತ್ಯ ಸಂಶೋಧನೆಯ ಹೊಸ ಎಲ್ಲೆಗಳು ಕುರಿತ ವಿಚಾರ ಸಂಕಿರಣದಲ್ಲಿ ಜ್ಞಾನಪೀಠ ಪುರಸ್ಕೃತ ಸಾಹಿತಿ ಡಾ. ಯು.ಆರ್. ಅನಂತಮೂರ್ತಿ, ವಿಮರ್ಶಕ ಡಾ. ಸಿ.ಎನ್. ರಾಮಚಂದ್ರನ್, ಕೇಂದ್ರ ಸಾಹಿತ್ಯ ಅಕಾಡೆಮಿ ಕಾರ್ಯದರ್ಶಿ ಅಗ್ರಹಾರ ಕೃಷ್ಣಮೂರ್ತಿ ಹಾಗೂ ವೂಡೆ ಕೃಷ್ಣ ಪಾಲ್ಗೊಂಡರು.

ಉದಯವಾಣಿ ನವೆಂಬರ್ 11, 2008

# ಉದ್ಘಾಟನೆ



ಶೇಷಾದ್ರಿಪುರಂ ಸ್ತ್ರೀ ಸಮಾಜ ಮಾಧ್ಯಮಿಕ ಶಾಲೆಯಲ್ಲಿ ಡಾ। ಜಿ.ಪಿ. ರಾಜರತ್ನಂ ಸ್ಮರಣಾರ್ಥ ನಡೆದ ಅಂತರ ಶಾಲಾ ನಾಟಕ ಮತ್ತು ಸಮೂಹ ಗಾಯನ ಸ್ಪರ್ಧೆಯನ್ನು ಕಾಲೇಜು ಶಿಕ್ಷಣ ಇಲಾಖೆ ನಿರ್ದೇಶಕಿ ಡಾ। ಶಾಂತಲಕ್ಷ್ಮಿ ಉದ್ಘಾಟಿಸಿದರು. ಡಾ। ಜಿ.ಪಿ. ರಾಜರತ್ನಂ ಅವರ ಪುತ್ರಿ ಶ್ರೀಮತಿ ಎಸ್. ಕುಮಾರ್, ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಶಾಲಾಭಿವೃದ್ಧಿ ಸಮಿತಿ ಸದಸ್ಯ ಬಿ.ವಿ. ಎಸ್. ರಾವ್ ಮತ್ತಿತರರು ಉಪಸ್ಥಿತರಿದ್ದರು.

ಉದಯವಾಣಿ ಮಂಗಳವಾರ 11 ನವೆಂಬರ್ 2008

## ದೇಸಿ ಆಟಗಳ ಕೂಟ

ಮಲ್ಲೇಶ್ವರ: ಶೇಷಾದ್ರಿಪುರಂ ಶಿಕ್ಷಣ ದತ್ತಿಯ ವತಿಯಿಂದ ಇಂದು (ನ. 11) ಬೆಳಿಗ್ಗೆ 9.30ಕ್ಕೆ 'ದೇಸಿ ಆಟಗಳ ಕೂಟ' ಕಾರ್ಯಕ್ರಮ ನಡೆಯಲಿದೆ. ಸ್ಥಳ: ಮಲ್ಲೇಶ್ವರಂ ಆಟದ ಮೈದಾನ. ಕಾರ್ಯಕ್ರಮವನ್ನು ನಿವೃತ್ತ ಪೊಲೀಸ್ ಆಯುಕ್ತ ಬಿ.ಕೆ. ಶಿವರಾಂ ಉದ್ಘಾಟಿಸಲಿದ್ದಾರೆ.

ಮಧ್ಯಾಹ್ನ 3.30ಕ್ಕೆ ಸಮಾರೋಪ ಸಮಾರಂಭ. ಮುಖ್ಯ ಅತಿಥಿಗಳಾಗಿ ಕನ್ನಡ ಪುಸ್ತಕ ಪ್ರಾಧಿಕಾರದ ಮಾಜಿ ಅಧ್ಯಕ್ಷ ಪ್ರೊ. ಎಸ್. ಜಿ. ಸಿದ್ದರಾಮಯ್ಯ, ಶಾಸಕ ಕೃಷ್ಣಬೈರೇಗೌಡ, ಕ್ರೀಡಾಪಟು ಬಿ. ಸುದರ್ಶನ್ ಭಾಗವಹಿಸಲಿದ್ದಾರೆ. ದತ್ತಿಯ ಗೌರವ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಅಧ್ಯಕ್ಷತೆ ವಹಿಸಲಿದ್ದಾರೆ.

ಬೆಂಗಳೂರು ವಿಜಯ | ಮಂಗಳವಾರ, 11 ನವೆಂಬರ್ 2008



ಸಂವಾದ:
ದೇಸೀ ಆಟಗಳ ಕೂಟ. ಬೆಳಗ್ಗೆ 9.30ಕ್ಕೆ ಉದ್ಘಾಟನೆ: ನಿವೃತ್ತ ಸಹಾಯಕ ಪೊಲೀಸ್ ಆಯುಕ್ತ ಬಿ.ಕೆ. ಶಿವರಾಂ. ಮಧ್ಯಾಹ್ನ 3.30ಕ್ಕೆ ಸಮಾರೋಪ. ಅತಿಥಿಗಳು: ಕನ್ನಡ ಪುಸ್ತಕ ಪ್ರಾಧಿಕಾರ ಮಾಜಿ ಅಧ್ಯಕ್ಷ ಪ್ರೊ. ಎಸ್. ಜಿ. ಸಿದ್ದರಾಮಯ್ಯ, ಶಾಸಕ ಕೃಷ್ಣ ಬೈರೇಗೌಡ, ಕ್ರೀಡಾಪಟು ಬಿ. ಸುದರ್ಶನ್, ಅಧ್ಯಕ್ಷತೆ: ಶೇಷಾದ್ರಿಪುರಂ ಶಿಕ್ಷಣ ದತ್ತಿ ಕಾರ್ಯದರ್ಶಿ ಪಿ. ಕೃಷ್ಣ. ಸ್ಥಳ: ಆಟದ ಮೈದಾನ, ಮಲ್ಲೇಶ್ವರ.



ಶೇಷಾದ್ರಿಪುರಂ ಕಾಲೇಜು:
ನ್ಯೂ ಫ್ರಂಟಿಯರ್ಸ್ ಆಫ್ ಲಿಟ್ರರಿ ರಿಸರ್ಚ್: ರಾಷ್ಟ್ರೀಯ ಮಟ್ಟದ ವಿಚಾರಸಂಕಿರಣ. ಬೆಳಗ್ಗೆ 10ಕ್ಕೆ ಉದ್ಘಾಟನೆ: ಸಾಹಿತಿ ಡಾ. ಯು. ಆರ್. ಅನಂತಮೂರ್ತಿ, ಅಧ್ಯಕ್ಷತೆ: ಸಂಸ್ಥೆ ಕಾರ್ಯದರ್ಶಿ ಪಿ. ಕೃಷ್ಣ. ಮಧ್ಯಾಹ್ನ 12ರಿಂದ ಗೋಷ್ಠಿ. ಸ್ಥಳ: ಉಪನ್ಯಾಸ ಕೊಠಡಿ, ಜ್ಞಾನಜ್ಯೋತಿ ಸಭಾಂಗಣ, ಸೆಂಟ್ರಲ್ ಕಾಲೇಜು.

ಪ್ರಜಾವಾಣಿ

ಮಂಗಳವಾರ 11ನೇ ನವೆಂಬರ್ 2008

**ಶೇಷಾದ್ರಿಪುರ ಕಾಲೇಜು ಮತ್ತು ಸಾಹಿತ್ಯ ಅಕಾಡೆಮಿ:** ಜ್ಞಾನಜ್ಯೋತಿ ಸಭಾಂಗಣ, ಸೆಂಟ್ರಲ್ ಕಾಲೇಜು ಆವರಣ. 'ಸಾಹಿತ್ಯಕ ಅಧ್ಯಯನದ ಹೊಸ ಆಯಾಮಗಳು' ಕುರಿತು ರಾಷ್ಟ್ರೀಯ ವಿಚಾರ ಸಂಕಿರಣ. ಅತಿಥಿಗಳು– ಸಾಹಿತಿ ಡಾ. ಯು. ಆರ್. ಅನಂತಮೂರ್ತಿ, ವಿಮರ್ಶಕ ಡಾ. ಸಿ. ಎನ್. ರಾಮಚಂದ್ರನ್, ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ. ಬೆಳಿಗ್ಗೆ 10.

DECCAN HERALD

Tuesday, November 11, 2008

**Seshadripuram College in association with Sahitya Akademi:** National-level symposium on 'New Frontiers of Literary Research', Litterateur U R Ananthamurthy, Critic C N Ramachandran to participate, Seminar Hall, Jnana Jyothi Auditorium, Central College, 10 am.

THE NEW INDIAN EXPRESS
TUESDAY, NOVEMBER 11 | 2008 | BANGALORE

SEMINARS

SESHADRIPURAM COLLEGE

Inauguration of two-day national-level symposium titled 'New frontiers of literary research', by Dr U R Ananthamurthy, at Central College, 10 a.m.

ಈ ಸಂಜೆ

ಮಂಗಳವಾರ, 11 ನವೆಂಬರ್, 2008




ಶೇಷಾದ್ರಿಪುರಂ ಸ್ತ್ರೀ ಸಮಾಜ ಶಾಲೆ ಡಾ. ಜಿ.ಪಿ. ರಾಜರತ್ನಂ ಸ್ಮರಣಾರ್ಥ ಏರ್ಪಡಿಸಿದ್ದ ಅಂತರ ಶಾಲಾ ನಾಟಕ ಮತ್ತು ಸಮೂಹ ಗಾಯನ ಸ್ಪರ್ಧೆಯನ್ನು ನಿರ್ದೇಶಕಿ ಡಾ. ಶಾಂತಲಕ್ಷ್ಮೀ ಉದ್ಘಾಟಿಸಿದರು. ರಾಜರತ್ನಂ ಪುತ್ರಿ ಶ್ರೀಮತಿ ಎಸ್. ಕುಮಾರ್, ವೂಡೇ ಪಿ. ಕೃಷ್ಣ, ಬಿ.ವಿ.ಎಸ್. ರಾವ್, ಎಂ. ಗೀತಾ ಹಾಜರಿದ್ದರು.

ಸಂಜೆವಾಣಿ

ಮಂಗಳವಾರ 11 ನವೆಂಬರ್ 2008




ಡಾ. ಜಿ.ಪಿ. ರಾಜರತ್ನಂ ಸ್ಮರಣಾರ್ಥ ಶೇಷಾದ್ರಿಪುರಂ ಸ್ತ್ರೀ ಸಮಾಜ ಮಾಧ್ಯಮಿಕ ಶಾಲೆ ಏರ್ಪಡಿಸಿದ್ದ ಅಂತರ ಶಾಲಾ ನಾಟಕ ಮತ್ತು ಸಮೂಹ ಗಾಯನ ಸ್ಪರ್ಧಾ ಕಾರ್ಯಕ್ರಮವನ್ನು ಕಾಲೇಜು ಶಿಕ್ಷಣ ಇಲಾಖೆ ನಿರ್ದೇಶಕಿ ಡಾ. ಶಾಂತಲಕ್ಷ್ಮಿ ಉದ್ಘಾಟಿಸಿದರು. ಡಾ. ಜಿ.ಪಿ. ರಾಜರತ್ನಂ ಪುತ್ರಿ ಎಸ್. ಕುಮಾರಿ, ಸಮೂಹ ಶಿಕ್ಷಣ ಸಂಸ್ಥೆ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಶಾಲಾ ಅಭಿವೃದ್ಧಿ ಸಮಿತಿ ಸದಸ್ಯ ಬಿ.ವಿ.ಎಸ್. ರಾವ್ ಹಾಗೂ ಮುಖ್ಯೋಪಾಧ್ಯಾಯಿನಿ ಎಂ. ಗೀತಾ ಪಾಲ್ಗೊಂಡಿದ್ದರು.

ಉದಯವಾಣಿ ಮಂಗಳವಾರ 11 ನವೆಂಬರ್ 2008



ಮುನ್ನೋಟ

# ರಾಷ್ಟ್ರೀಯ ಮಟ್ಟದ ವಿಚಾರ ಸಂಕಿರಣ

ಸೆಂಟ್ರಲ್ ಕಾಲೇಜು

**ಶೇ**ಷಾದ್ರಿಪುರಂ ಕಾಲೇಜಿನ ಇಂಗ್ಲೀಷ್ ವಿಭಾಗ ಮತ್ತು ಸಾಹಿತ್ಯ ಅಕಾಡೆಮಿಗಳ ಸಂಯುಕ್ತ ಆಶ್ರಯದಲ್ಲಿ ಇಂದು ಮತ್ತು ನಾಳೆ (ನ. 11, 12) ಎರಡು ದಿನಗಳ ರಾಷ್ಟ್ರೀಯ ವಿಚಾರ ಸಂಕಿರಣ ನಡೆಯಲಿದೆ. ಸ್ಥಳ: ಜ್ಞಾನಜ್ಯೋತಿ ಸಭಾಂಗಣ, ಸೆಂಟ್ರಲ್ ಕಾಲೇಜು.

ನ. 11ರಂದು ಬೆಳಿಗ್ಗೆ 10 ಗಂಟೆಗೆ ವಿಚಾರ ಸಂಕಿರಣವನ್ನು ಡಾ। ಯು.ಆರ್. ಅನಂತಮೂರ್ತಿ ಉದ್ಘಾಟಿಸಲಿದ್ದಾರೆ. ವಿಮರ್ಶಕ ಡಾ। ಸಿ.ಎನ್. ರಾಮಚಂದ್ರನ್ ಪ್ರಧಾನ ಭಾಷಣ ಮಾಡಲಿದ್ದಾರೆ. ಪ್ರಾಂಶುಪಾಲ ಡಾ। ನರಹಳ್ಳಿ ಬಾಲಸುಬ್ರಹ್ಮಣ್ಯ, ಇಂಗ್ಲೀಷ್ ವಿಭಾಗದ ಮುಖ್ಯಸ್ಥೆ ಪ್ರೊ। ಅನುರಾಧಾ ರಾಯ್, ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ವೂಡೆ ಪಿ. ಕೃಷ್ಣ, ಸಾಹಿತ್ಯ ಅಕಾಡೆಮಿಯ ಎ.ಎಸ್. ಇಳಂಗೋವಿನ್ ಉಪಸ್ಥಿತರಿರುತ್ತಾರೆ.

ವಿಚಾರ ಸಂಕಿರಣದಲ್ಲಿ ಅನಿವಾಸಿ ಭಾರತೀಯ ಸಾಹಿತ್ಯ, ತೌಲನಿಕ ಸಾಹಿತ್ಯ, ನವ್ಯ ಸಾಹಿತ್ಯ, ದಲಿತ ಸಾಹಿತ್ಯ, ಜಾನಪದ ಸಾಹಿತ್ಯ, ಭಾಷಾಂತರ ಅಧ್ಯಯನ, ಸಾಂಸ್ಕೃತಿಕ ಅಧ್ಯಯನ ಎಂಬ ಏಳು ಪ್ರಕಾರಗಳ ಕುರಿತು ರಾಷ್ಟ್ರದ ವಿವಿಧ ವಿಶ್ವವಿದ್ಯಾಲಯಗಳ ಡಾ। ಮಕರಂದ್ ಪರಾಂಜಪೆ, ಡಾ। ಹರೀಶ್ ನಾರಂಗ್, ಡಾ। ಡಿ. ವೆಂಕಟರಾವ್, ಡಾ। ರಾಜೇಂದ್ರ ಚೆನ್ನಿ, ಡಾ। ಎಂ. ದಾಸನ್, ಡಾ। ಅನೂಪ್ ಧರ್, ಡಾ। ಸೌಮಿತ್ರ ಚಕ್ರವರ್ತಿ ವಿಚಾರ ಮಂಡಿಸಲಿದ್ದಾರೆ. ನ. 12ರಂದು ಮಧ್ಯಾಹ್ನ 3 ಗಂಟೆಗೆ ವಿಚಾರ ಸಂಕಿರಣದ ಸಮಾರೋಪದಲ್ಲಿ ಕಮಲಾ ರಂಗನಾಥ್ ಸಮಾರೋಪ ಭಾಷಣ ಮಾಡಲಿದ್ದಾರೆ. ಮುಖ್ಯ ಅತಿಥಿಗಳಾಗಿ ಪ್ರೊ। ಕೆ.ವಿ. ಕೋದಂಡರಾಮಯ್ಯ, ಸಂಜಯ್ ವೀರ ಸಿಂಗ್ ಭಾಗವಹಿಸಲಿದ್ದು, ಪ್ರಾಂಶುಪಾಲ ಡಾ। ನರಹಳ್ಳಿ ಬಾಲಸುಬ್ರಹ್ಮಣ್ಯ ಅಧ್ಯಕ್ಷತೆ ವಹಿಸಲಿದ್ದಾರೆ.

ಪ್ರಜಾವಾಣಿ
ಸೋಮವಾರ 10ನೇ ನವೆಂಬರ್ 2008



ಶೇಷಾದ್ರಿಪುರಂ ಸ್ತ್ರೀ ಸಮಾಜ ಮಾಧ್ಯಮಿಕ ಶಾಲೆ ಏರ್ಪಡಿಸಿದ್ದ ಡಾ. ಜಿ.ಪಿ.ರಾಜರತ್ನಂ ಸ್ಮರಣಾರ್ಥ ಅಂತರ ಶಾಲಾ ಮಟ್ಟದ ನಾಟಕ ಮತ್ತು ಸಮೂಹ ಗಾಯನ ಸ್ಪರ್ಧೆಗೆ ಕಾಲೇಜು ಶಿಕ್ಷಣ ಇಲಾಖೆ ನಿರ್ದೇಶಕಿ ಡಾ. ಶಾಂತಲಕ್ಷ್ಮಿ ಚಾಲನೆಯಿತ್ತರು. ರಾಜರತ್ನಂ ಪುತ್ರಿ ಶ್ರೀಮತಿ ಎಸ್.ಕುಮಾರ್, ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಕಾರ್ಯದರ್ಶಿ ಪ್ರೊ. ಪಿ.ಕೃಷ್ಣ, ಶಾಲಾಭಿವೃದ್ಧಿ ಸಮಿತಿ ಸದಸ್ಯ ಬಿ.ವಿ.ಎಸ್. ರಾವ್, ಮುಖ್ಯೋಪಾಧ್ಯಾಯಿನಿ ಎಂ.ಗೀತಾ ಉಪಸ್ಥಿತರಿದ್ದರು.

ಬೆಂಗಳೂರು ವಿಜಯ | ಬುಧವಾರ, 22 ಅಕ್ಟೋಬರ್ 2008






ಭಾರತೀಯ ರೆಡ್ ಕ್ರಾಸ್‌ನ ರಾಜ್ಯ ಘಟಕ ಏರ್ಪಡಿಸಿದ್ದ ರಕ್ತದಾನ ಕಾರ್ಯಕ್ರಮದಲ್ಲಿ ಸಂಸ್ಥೆಯ ಉಪಾಧ್ಯಕ್ಷ ವೂಡೆ ಪಿ. ಕೃಷ್ಣ, ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ನಿರ್ದೇಶಕ ಡಾ. ಎಚ್. ಎಸ್. ಶಿವಶಂಕರ್, ಬಿ.ಎನ್. ವೆಂಕಟರಾಮಯ್ಯ ಶೆಟ್ಟಿ ಪಾಲ್ಗೊಂಡಿದ್ದರು.

ಬುಧವಾರ 15 ಅಕ್ಟೋಬರ್ 2008 ಈ ಸಂಜೆ



ಲಕ್ಸಂಬರ್ಗ್ ದೇಶದ ರಾಯಭಾರಿ ಡಾ. ಮಾರ್ಕ್ ಕೋಟ್ ನಗರದ ರೆಡ್‌ಕ್ರಾಸ್ ರಕ್ತನಿಧಿಗೆ ಭೇಟಿ ನೀಡಿದ್ದ ಸಂದರ್ಭದಲ್ಲಿ ಸಂಸ್ಥೆ ಉಪಾಧ್ಯಕ್ಷ ವೂಡೇ ಪಿ.ಕೃಷ್ಣ, ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಡಾ.ಎನ್.ಜಿ. ನಾರಾಯಣ, ಟಿ.ಪ್ರಭಾಕರ್ ಹಾಜರಿದ್ದರು.

ಸಂಯುಕ್ತ ಕರ್ನಾಟಕ **ಕರ್ನಾಟಕ ರಾಜಧಾನಿ** 14-10-2008



ಬೆಂಗಳೂರಿನಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯು ಪ್ರಾಥಮಿಕ ಶಾಲಾ ಶಿಕ್ಷಕರುಗಳಿಗೆ ಏರ್ಪಡಿಸಿದ್ದ ಕಾರ್ಯಾಗಾರವನ್ನು ಶಿಕ್ಷಣ ತಜ್ಞ ಡಾ. ಸಮೀರ್ ಸಿಂಹ ಉದ್ಘಾಟಿಸಿದರು. ದತ್ತಿಯ ಪದಾಧಿಕಾರಿಗಳಾದ ಎನ್.ಆರ್. ಪಂಡಿತಾರಾಧ್ಯ, ಕೃಷ್ಣ, ಎ.ಆರ್.ಶ್ರೀನಿವಾಸಯ್ಯ, ಸರೋಜ ಕೆ.ಎಂ.ನಂಜಪ್ಪ, ಎಂ.ಗೀತ, ನೇತ್ರಾಮಣಿ, ಹೇಮಾವತಿ ಉಪಸ್ಥಿತರಿದ್ದರು.

ಪ್ರಜಾವಾಣಿ ಮಂಗಳವಾರ 14ನೇ ಅಕ್ಟೋಬರ್ 2008



ಬೆಂಗಳೂರಿನ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಹಮ್ಮಿಕೊಂಡಿದ್ದ ಸ್ವಯಂ ಪ್ರೇರಿತ ರಕ್ತದಾನ ಶಿಬಿರಕ್ಕೆ ಲಕ್ಸಂಬರ್ಗ್ ದೇಶದ ರಾಯಭಾರಿ ಡಾ. ಮಾರ್ಕ್ ಕೋಟ್ ಸೋಮವಾರ ಭೇಟಿ ನೀಡಿದ್ದರು. ರಾಜ್ಯ ರೆಡ್‌ಕ್ರಾಸ್ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ.ನಾರಾಯಣ, ಉಪಾಧ್ಯಕ್ಷ ವೂಡೇ ಪಿ.ಕೃಷ್ಣ, ಖಜಾಂಚಿ ರಾಜು ಚಂದ್ರಶೇಖರ್, ಕಾರ್ಯಕಾರಿ ಸಮಿತಿ ಸದಸ್ಯ ಟಿ.ಪ್ರಭಾಕರ್ ಹಾಜರಿದ್ದರು.

ಸಂಯುಕ್ತ ಕರ್ನಾಟಕ

14-10-2008



ನಗರದ ಭಾರತೀಯ ರೆಡ್‌ಕ್ರಾಸ್ ರಕ್ತನಿಧಿಗೆ ಸೋಮವಾರ ಲಕ್ಸಂಬರ್ಗ್ ದೇಶದ ರಾಯಭಾರಿ ಡಾ. ಮಾರ್ಕ್‌ಕೋಟ್ ಭೇಟಿ ನೀಡಿದರು. ಸಂಸ್ಥೆ ಉಪಾಧ್ಯಕ್ಷ ವೂಡೇ-ಪಿ. ಕೃಷ್ಣ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ. ಎನ್.ಜೆ. ನಾರಾಯಣ, ಸದಸ್ಯ ಟಿ. ಪ್ರಭಾಕರ್ ಉಪಸ್ಥಿತರಿದ್ದರು.

ಪ್ರಜಾವಾಣಿ ಮಂಗಳವಾರ 14 ಅಕ್ಟೋಬರ್ 2008




ಲಕ್ಸಂಬರ್ಗ್ ದೇಶದ ರಾಯಭಾರಿ ಡಾ. ಮಾರ್ಕ್‌ಕೋಟ್‌ರವರು ನಗರದ ರೆಡ್‌ಕ್ರಾಸ್ ರಕ್ತನಿಧಿಗೆ ಭೇಟಿ ನೀಡಿದರು. ರಾಜ್ಯ ರೆಡ್‌ಕ್ರಾಸ್ ಸಂಸ್ಥೆಯ ಉಪಾಧ್ಯಕ್ಷ ವೊಡೇ ಪಿ. ಕೃಷ್ಣ, ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ. ಎನ್. ಜಿ. ನಾರಾಯಣ ಮುಂತಾದವರು ಚಿತ್ರದಲ್ಲಿದ್ದಾರೆ.

ಕನ್ನಡಪ್ರಭ, ಬೆಂಗಳೂರು ಸೋಮವಾರ, 13 ಅಕ್ಟೋಬರ್ 2008



## ಕಾರ್ಯಾಗಾರ

ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಶೇಷಾದ್ರಿಪುರ ಶಿಕ್ಷಣ ದತ್ತಿ ಏರ್ಪಡಿಸಿದ್ದ ಸಂಪನ್ಮೂಲಾಭಿವೃದ್ಧಿ ಕಾರ್ಯಾಗಾರವನ್ನು ಶಿಕ್ಷಣ ತಜ್ಞೆ ಡಾ।ಸಮೀರ್ ಸಿಂಹ ಉದ್ಘಾಟಿಸಿದರು. ಎನ್.ಆರ್. ಪಂಡಿತಾರಾಧ್ಯ, ವೂಡೆ ಪಿ. ಕೃಷ್ಣ, ಎ.ಆರ್. ಶ್ರೀನಿವಾಸಯ್ಯ, ಸರೋಜ ಕೆ.ಎಂ. ನಂಜಪ್ಪ, ನೇತ್ರಾಮಣಿ, ಹೇಮಾವತಿ ಹಾಜರಿದ್ದರು.

ಪ್ರಜಾವಾಣಿ

ಭಾನುವಾರ
12ನೇ ಅಕ್ಟೋಬರ್ 2008



## ಕಾರ್ಯಾಗಾರ

ಶೇಷಾದ್ರಿಪುರ ಶಿಕ್ಷಣ ದತ್ತಿಯು ಪ್ರಾಥಮಿಕ ಶಾಲಾ ಶಿಕ್ಷಕರಿಗಾಗಿ ಎರಡು ದಿನಗಳ ಕಾಲ ಏರ್ಪಡಿಸಿದ್ದ ಕಾರ್ಯಾಗಾರವನ್ನು ಶಿಕ್ಷಣ ತಜ್ಞ ಡಾ.ಸಮೀರ್ ಸಿಂಹ ಶುಕ್ರವಾರ ಉದ್ಘಾಟಿಸಿದರು. ದತ್ತಿಯ ಪದಾಧಿಕಾರಿಗಳಾದ ಎನ್.ಆರ್.ಪಂಡಿತಾರಾಧ್ಯ, ವೂಡೆ ಪಿ.ಕೃಷ್ಣ, ಎ.ಆರ್.ಶ್ರೀನಿವಾಸಯ್ಯ, ಸರೋಜ ಕೆ.ಎಂ.ನಂಜಪ್ಪ ಹಾಗೂ ಮುಖ್ಯ ಶಿಕ್ಷಕರು ಪಾಲ್ಗೊಂಡಿದ್ದರು.

# ಸ್ಪರ್ಧೆ ಎದುರಿಸಲು ಜ್ಞಾನ ಅಗತ್ಯ

ಯಲಹಂಕ: ವಿದ್ಯಾರ್ಥಿಗಳು ಇಂದಿನ ಸ್ಪರ್ಧಾತ್ಮಕ ಜಗತ್ತಿನಲ್ಲಿ ಗೆಲ್ಲಲು ಹೊಸ ಬಗೆಯ ಕೌಶಲ, ಜ್ಞಾನ ಬೆಳೆಸಿಕೊಳ್ಳಬೇಕೆಂದು ಮ್ಯಾನೇಜ್‌ಮೆಂಟ್ ನೆಕ್ಸ್ಟ್ ಸಂಸ್ಥೆಯ ಸಂಪಾದಕ ಬೆನ್ನಿಕ್ಸ್ ಪರಮಾನಂದ್ ಸಲಹೆ ನೀಡಿದರು.

ಯಲಹಂಕ ಉಪನಗರದ ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಸ್ಟಡೀಸ್‌ನ 2008ರ ಸಾಲಿನ ಎಂಬಿ.ಎ ತರಗತಿ ಉದ್ಘಾಟಿಸಿ ಮಾತನಾಡಿದರು.

ಶೇಷಾದ್ರಿಪುರಂ ಕಾಲೇಜಿನ ಕಾರ್ಯದರ್ಶಿ ವುಡೇ ಪಿ. ಕೃಷ್ಣ ಮಾತನಾಡಿ, ವಿದ್ಯಾರ್ಥಿಗಳು ವಿವೇಕಾನಂದರ ತತ್ತ್ವಗಳನ್ನು ಅಳವಡಿಸಿಕೊಂಡು ಮಾನವೀಯತೆ ಬೆಳೆಸಿಕೊಳ್ಳಬೇಕೆಂದರು.

ಟ್ರಸ್ಟ್‌ನ ಗೌರವಾಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ ಅಧ್ಯಕ್ಷತೆ ವಹಿಸಿದ್ದರು. ಕಾಲೇಜಿನ ಪ್ರಿನ್ಸಿಪಾಲ್ ಡಾ. ಎಂ.ಪ್ರಕಾಶ್ ಸ್ವಾಗತಿಸಿದರು. ಡಾ.ಡಿ.ಕೆ.ಮೂರ್ತಿ ವಂದಿಸಿದರು. ಕಾರ್ಯದರ್ಶಿ ವೀರಭದ್ರಯ್ಯ, ಸರೋಜಾ ನಂಜಪ್ಪ ಉಪನ್ಯಾಸಕರು ಹಾಜರಿದ್ದರು.

ಉದಯವಾಣಿ ಶುಕ್ರವಾರ 10 ಅಕ್ಟೋಬರ್ 2008

# ಕಾವ್ಯಕ್ಕೆ ತಾರಾಮೌಲ್ಯ ತಂದುಕೊಟ್ಟ ದೊಡ್ಡರಂಗೇಗೌಡ: ಡಾ|ನಲ್ಲೂರು

ಬೆಂಗಳೂರು, ಅ. 9: ಡಾ|ದೊಡ್ಡರಂಗೇಗೌಡ ಅವರು ಕಾವ್ಯಕ್ಕೆ ತಾರಾಮೌಲ್ಯ ತಂದುಕೊಟ್ಟ ಕವಿ ಎಂದು ಕನ್ನಡ ಸಾಹಿತ್ಯ ಪರಿಷತ್ ರಾಜ್ಯಾಧ್ಯಕ್ಷ ಡಾ|ನಲ್ಲೂರು ಪ್ರಸಾದ್ ಇಂದು ಹೇಳಿದರು.

ಕರ್ನಾಟಕ ರಕ್ಷಣಾ ವೇದಿಕೆ ಪ್ರಕಟಿಸಿದ ವಿಧಾನಪರಿಷತ್ ಸದಸ್ಯ, ಕವಿ ದೊಡ್ಡರಂಗೇಗೌಡರ 'ಕಾವ್ಯ ಕಲ್ಯಾಣಿ' ಕೃತಿ ಬಿಡುಗಡೆ ಮಾಡಿ ಮಾತನಾಡಿದರು.

ತಮ್ಮದೇ ಆದ ವಲಯ ಸೃಷ್ಟಿಸಿಕೊಳ್ಳಲು ಹೋಗದೇ, ತಮ್ಮ ಪಾಡಿಗೆ ಕಾವ್ಯ ರಚಿಸುವ ಕಾಯಕದಲ್ಲಿ ತೊಡಗಿಕೊಂಡ ಗೌಡರಿಗೆ, ಅದೇ ಕಾರಣದಿಂದಲೇ ಅವರ ಸಾಮರ್ಥ್ಯಕ್ಕೆ ತಕ್ಕ ಮೌಲ್ಯ ಸಿಕ್ಕಿಲ್ಲ ಎಂದು ವಿಷಾದಿಸಿದರು.

ಕವಿಗೆ ಕವಿ ಮಣಿವನ್ ಎಂಬುದರ ಬದಲಿಗೆ ಕವಿಗೆ ಕವಿ ಮುನಿವನ್ ಎಂಬುದೇ ಹೆಚ್ಚು ಪ್ರಚಲಿತದಲ್ಲಿದೆ. ಒಬ್ಬರನ್ನು ಕಂಡರೆ ಮತ್ತೊಬ್ಬರಿಗೆ ಆಗದ ದುರಂತ ಪರಿಸ್ಥಿತಿಯನ್ನು ನಾವು ಎದುರಿಸುತ್ತಿದ್ದೇವೆ. ಗ್ರಾಮೀಣ ಪರಿಸರದಿಂದ ಸಾಮಾನ್ಯ ವ್ಯಕ್ತಿಯೊಬ್ಬ ಈ ಮಟ್ಟಿನ ಯಶಸ್ಸು ಗಳಿಸಲು ಸಾಧ್ಯವಾಗಿರುವುದು ಅವರ ಅಂತರಂಗದೊಳಗೆ ಅಡಗಿರುವ ಕವಿ ಚೇತನದಿಂದಲೇ ಎಂದು ಅಭಿಪ್ರಾಯಪಟ್ಟರು.

ಏರಾ ಏರಿ ಅಂಬರದಾಗೆ ನೇಸರ ನಗುತಾನೆ ಎಂಬ ಹಾಡು ಇವತ್ತು ಹಳ್ಳಿಯಲ್ಲಿ ದನ ಕಾಯುವ ಓದುಬಾರದ ಹುಡುಗನ ಬಾಯಲ್ಲೂ ನಲಿಯುತ್ತಿರುವುದು ಜ್ಞಾನಪೀಠ ಪ್ರಶಸ್ತಿ ಬಂದದ್ದಕ್ಕಿಂತ ಹೆಚ್ಚಿನ ಹೆಗ್ಗಳಿಕೆ. ಚಲನಚಿತ್ರ ಹಾಗೂ ಸಾಹಿತ್ಯ ಕ್ಷೇತ್ರದ ಸ್ನೇಹಸೇತುವಾಗಿ ಕೆಲಸ ಮಾಡಿದ ದೊಡ್ಡರಂಗೇ ಗೌಡರು, ಜನ ಜೀವನದ ಎಲ್ಲಾ ಆಯಾಮಗಳ ಕುರಿತು ಕವಿತೆ ರಚಿಸುವ ಸಾಮರ್ಥ್ಯ ಹೊಂದಿದ್ದಾರೆಂದರು.

ಪುಸ್ತಕ ಕುರಿತು ಮಾತನಾಡಿದ ಪ್ರೊ.ಪಿ.ಕೃಷ್ಣ, ಗೌಡರ ಕವಿತೆಗಳಲ್ಲಿ ಸಮಾಜಮುಖಿ ಚಿಂತನೆ, ಆಧ್ಯಾತ್ಮಿಕ ತುಡಿತ, ಶ್ರೀಸಾಮಾನ್ಯನ ಪಾಡು, ಶ್ರೀಮಂತರ ದಬ್ಬಾಳಿಕೆಗೆ ವಿರೋಧ ಎಲ್ಲವೂ ಇದೆ. ಕೇಳುಗರು ಹಾಗೂ ಓದುಗರು ಹೀಗೆ ಇಬ್ಬರನ್ನೂ ಸಂಪಾದಿಸಿದ ಕವಿ ಎಂದು ಹೇಳಿದರು.

ನಿವೃತ್ತ ಕನ್ನಡ ಅಧ್ಯಾಪಕ ಪ್ರೊ|ಜಿ. ಅಶ್ವತ್ಥನಾರಾಯಣ ಅಧ್ಯಕ್ಷತೆ ವಹಿಸಿದ್ದರು. ಕವಿ ದೊಡ್ಡರಂಗೇಗೌಡ, ಬೆಂಗಳೂರು ನಗರ ಜಿಲ್ಲಾ ಕಸಾಪ ಅಧ್ಯಕ್ಷ ಸಿ.ಕೆ. ರಾಮೇಗೌಡ, ರಕ್ಷಣಾ ವೇದಿಕೆಯ ರಾಜ್ಯಾಧ್ಯಕ್ಷ ಎಚ್. ಶಿವರಾಮೇಗೌಡ, ಕಾರ್ಯಾಧ್ಯಕ್ಷ ಪ್ರವೀಣಕುಮಾರಶೆಟ್ಟಿ ಮೊದಲಾದವರಿದ್ದರು.

# ಕಸಾಪದಿಂದ 10 ಕೋಟಿ ರು. ನಿಧಿ ಸಂಗ್ರಹ

## ● ಆರ್ಥಿಕ ಸಂಪನ್ಮೂಲ ಹೆಚ್ಚಿಸಲು ಕನ್ನಡ ನಿಧಿ ಸ್ಥಾಪನೆ ● ಪ್ರಸ್ತುತ 2 ಲಕ್ಷ ರು. ಸಂಗ್ರಹ

ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತಿನ ಆರ್ಥಿಕ ಸಂಪನ್ಮೂಲ ಹೆಚ್ಚಿಸುವ ಸಲುವಾಗಿ ಕನ್ನಡ ನಿಧಿ ಸ್ಥಾಪಿಸಲಾಗಿದೆ.

ಡಾ। ನಲ್ಲೂರು ಪ್ರಸಾದ್ ಪರಿಷತ್ತಿನ ಅಧ್ಯಕ್ಷರಾಗಿ ಆಯ್ಕೆಯಾದ ನಂತರ ಈ ನಿಧಿ ಸ್ಥಾಪಿಸಲಾಗಿದ್ದು, ಹತ್ತು ಕೋಟಿ ರು. ನಿಧಿ ಸಂಗ್ರಹಿಸುವ ಗುರಿ ಹೊಂದಲಾಗಿದೆ.

ಈ ನಿಧಿಯನ್ನು ಸ್ಥಾಯಿ ನಿಧಿಯಾಗಿ ಇಡಲಾಗುತ್ತದೆ. ಇದರಿಂದ ಬರುವ ಬಡ್ಡಿ ಹಣವನ್ನು ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮಗಳಿಗೆ ಬಳಸಿಕೊಳ್ಳಲಾಗುತ್ತದೆ.

ಪ್ರಸ್ತುತ ಈ ನಿಧಿಯಲ್ಲಿ ಸುಮಾರು 2 ಲಕ್ಷ ರು. ಸಂಗ್ರಹವಾಗಿದೆ. ನಿಧಿಗೆ ದೇಣಿಗೆ ನೀಡುವವರು ಚೆಕ್ ಅಥವಾ ಡಿಡಿಯನ್ನು ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ಹೆಸರಿಗೆ ನೀಡಬಹುದು.

ಗುರುವಾರ ಸಾಹಿತಿ, ವಿಧಾನ ಪರಿಷತ್ ಸದಸ್ಯ ದೊಡ್ಡರಂಗೇಗೌಡರ ಕಾವ್ಯ ಕಲ್ಯಾಣಿ ಕವನ ಸಂಕಲನ ಬಿಡುಗಡೆ ಮಾಡಿ ಮಾತನಾಡಿದ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಡಾ। ನಲ್ಲೂರು ಪ್ರಸಾದ್, ಕನ್ನಡ ನಿಧಿಗೆ ದೇಣಿಗೆ ನೀಡುವ ಮೂಲಕ ಕನ್ನಡ ಕಟ್ಟುವ ಕೆಲಸಕ್ಕೆ ಸಹಕರಿಸುವಂತೆ ಸಾರ್ವಜನಿಕರಲ್ಲಿ ಮನವಿ ಮಾಡಿದರು.

ಕರ್ನಾಟಕ ರಕ್ಷಣಾ ವೇದಿಕೆ ನಯನ ಸಭಾಂಗಣದಲ್ಲಿ ಗುರುವಾರ ಈ ಕಾರ್ಯಕ್ರಮ ಹಮ್ಮಿಕೊಂಡಿತ್ತು.

'ಕಸಾಪ ನಲ್ಲೂರು ಪ್ರಸಾದನ ಪಿತ್ರಾರ್ಜಿತ ಆಸ್ತಿಯಲ್ಲ. ಮೂರು ವರ್ಷದ ಅವಧಿಗೆ ಕನ್ನಡದ ಕೆಲಸ ಮಾಡಿ ಎಂದು ಪರಿಷತ್ತಿನ ಅಧ್ಯಕ್ಷ ಸ್ಥಾನದಲ್ಲಿ ಕೂರಿಸಿದ್ದಾರೆ. ಆ ಕೆಲಸವನ್ನು ಶ್ರದ್ಧೆಯಿಂದ ಮಾಡುತ್ತೇನೆ. ಈ ಬಗ್ಗೆ ಬರುವ ಟೀಕೆಗಳಿಗೆ ಮನ್ನಣೆ ನೀಡದೆ ಕನ್ನಡಕ್ಕಾಗಿ ದುಡಿಯುತ್ತೇನೆ. ಇದಕ್ಕೆ ಎಲ್ಲರ ಸಹಕಾರ ಅಗತ್ಯ' ಎಂದರು.

**■ ಜ್ಞಾನಪೀಠಕ್ಕಿಂತ ದೊಡ್ಡ ಪ್ರಶಸ್ತಿ:** ಡಾ। ದೊಡ್ಡರಂಗೇಗೌಡರಿಗೆ ಸಾಹಿತ್ಯ ಲೋಕದಲ್ಲಿ ಸಿಗಬೇಕಾದ ಗೌರವ ಸಿಕ್ಕಿಲ್ಲ. ಆದರೆ, ಅವರ ಹಾಡುಗಳು ಗ್ರಾಮೀಣ ಭಾಗದಲ್ಲೂ ಜನಪ್ರಿಯವಾಗಿದೆ. ಇದು ಜ್ಞಾನಪೀಠ ಪ್ರಶಸ್ತಿಗಿಂತಲೂ ಮಿಗಿಲಾದ ಗೌರವ ಎಂದು ಹೇಳಿದರು.

ಶೇಷಾದ್ರಿಪುರ ಶಿಕ್ಷಣ ದತ್ತಿಯ ಗೌರವ ಕಾರ್ಯದರ್ಶಿ ವೂಡೆ ಪಿ. ಕೃಷ್ಣ ಕೃತಿ ಬಗ್ಗೆ ಮಾತನಾಡಿದರು. ವಿಶ್ರಾಂತ ಕನ್ನಡ ಪ್ರಾಧ್ಯಾಪಕ ಪ್ರೊ।ಜಿ. ಅಶ್ವತ್ಥನಾರಾಯಣ, ಕವಿ ಡಾ। ದೊಡ್ಡರಂಗೇಗೌಡ, ಕರ್ನಾಟಕ ರಕ್ಷಣಾ ವೇದಿಕೆ ಕಾರ್ಯಾಧ್ಯಕ್ಷ ಪ್ರವೀಣ್‌ಕುಮಾರ್ ಶೆಟ್ಟಿ, ರಾಜ್ಯಾಧ್ಯಕ್ಷ ಎಚ್. ಶಿವರಾಮೇಗೌಡ, ನಗರ ಘಟಕದ ಅಧ್ಯಕ್ಷ ಟಿ. ಶಿವಾನಂದ ಶೆಟ್ಟಿ, ಕಸಾಪ ಬೆಂಗಳೂರು ನಗರ ಘಟಕದ ಅಧ್ಯಕ್ಷ ಸಿ.ಕೆ. ರಾಮೇಗೌಡ ಹಾಜರಿದ್ದರು.



ಸಾಹಿತಿ ದೊಡ್ಡರಂಗೇಗೌಡರ ಕಾವ್ಯ ಕಲ್ಯಾಣಿ ಕವನ ಸಂಕಲನ ಬಿಡುಗಡೆ ಸಮಾರಂಭದಲ್ಲಿ ಕಸಾಪ ಅಧ್ಯಕ್ಷ ಡಾ। ನಲ್ಲೂರು ಪ್ರಸಾದ್, ಪ್ರೊ। ಜಿ. ಅಶ್ವತ್ಥನಾರಾಯಣ, ವೂಡೆ ಪಿ.ಕೃಷ್ಣ, ಪ್ರವೀಣ್‌ಕುಮಾರ್ ಶೆಟ್ಟಿ ಭಾಗವಹಿಸಿದ್ದರು.

ಈ ಸಂಜೆ

ಬುಧವಾರ 8 ಅಕ್ಟೋಬರ್ 2008

# ಕಾವ್ಯ ಕಲ್ಯಾಣಿ ಬಿಡುಗಡೆ

ಬೆಂಗಳೂರು, ಅ.8- ಕರ್ನಾಟಕ ರಕ್ಷಣಾ ವೇದಿಕೆ ಪ್ರವೀಣ್ ಶೆಟ್ಟಿ ಬಣದ ವತಿಯಿಂದ ಸಾಹಿತಿ ಹಾಗೂ ವಿಧಾನಪರಿಷತ್ ಸದಸ್ಯ ಪ್ರೊ. ದೊಡ್ಡರಂಗೇಗೌಡರ ಕಾವ್ಯ ಕಲ್ಯಾಣಿ ಹೊಸ ಕವನ ಸಂಕಲನ ಬಿಡುಗಡೆ ಕಾರ್ಯಕ್ರಮ ನಾಳೆ ನಡೆಯಲಿದೆ.

ನಗರದ ನಯನ ಸಭಾಂಗಣದಲ್ಲಿ ಸಂಜೆ 6ಕ್ಕೆ ನಡೆಯುವ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶೇಷಾದ್ರಿಪುರಂ ಕಾಲೇಜಿನ ಕಾರ್ಯದರ್ಶಿ ವೂಡೇ ಪಿ.ಕೃಷ್ಣ ವಹಿಸಲಿದ್ದು, ಕಸಾಪ ಅಧ್ಯಕ್ಷ ನಲ್ಲೂರು ಪ್ರಸಾದ್ ಹಾಗೂ ಪ್ರೊ. ಜಿ. ಅಶ್ವತ್ಥನಾರಾಯಣ ಅತಿಥಿಗಳಾಗಿ ಆಗಮಿಸಲಿದ್ದಾರೆ.

ವಿಜಯ ಕರ್ನಾಟಕ | ಸೋಮವಾರ, 6 ಅಕ್ಟೋಬರ್ 2008 | ಬೆಂಗಳೂರು

# ಸಂಘಟಿತ ಪ್ರಯತ್ನದಿಂದ ಅಭಿವೃದ್ಧಿ

**ವಿಕ ಸುದ್ದಿಲೋಕ**

ಬೆಂಗಳೂರು: ಸಂಘಟಿತ ಪ್ರಯತ್ನದಿಂದ ಮಾತ್ರ ಸಮುದಾಯದ ಅಭಿವೃದ್ಧಿ ಸಾಧ್ಯ ಎಂದು ಪಟ್ಟನಾಯಕನಹಳ್ಳಿ ಶ್ರೀ ನಂಜಾವಧೂತ ಸ್ವಾಮೀಜಿ ಹೇಳಿದರು.

ನಗರದಲ್ಲಿ ಶ್ರೀ ನಂಜಾವಧೂತ ಸೇವಾ ಸಮಿತಿ ಹಾಗೂ ಶ್ರೀ ಗುರು ಗುಂಡ ಬ್ರಹ್ಮೇಶ್ವರ ಯುವ ವೇದಿಕೆ ಏರ್ಪಡಿಸಿದ್ದ ಕುಂಚಿಟಿಗ ಒಕ್ಕಲಿಗ ವಿದ್ಯಾರ್ಥಿಗಳ ಪ್ರತಿಭಾ ಪುರಸ್ಕಾರ ಕಾರ್ಯಕ್ರಮದ ಸಾನ್ನಿಧ್ಯ ವಹಿಸಿ ಭಾನುವಾರ ಮಾತನಾಡಿದರು.

ಜನಾಂಗದ ಮುಖಂಡರು ವೈಷಮ್ಯ ಮರೆತು ಒಗ್ಗೂಡಿ,ಸಮುದಾಯವನ್ನು ಪ್ರಗತಿಯತ್ತ ಕೊಂಡೊಯ್ಯಬೇಕು. ವಿದ್ಯೆ ಬದುಕನ್ನು ಹಸನು ಮಾಡುತ್ತದೆ. ಹೀಗಾಗಿ, ವಿದ್ಯೆಗೆ ಹೆಚ್ಚಿನ ಮಹತ್ವ ಕೊಡಬೇಕು ಎಂದು ತಿಳಿಸಿದರು.

ಜನಾಂಗದ ಲಕ್ಷಾಂತರ ಜನ ಬಡತನ ರೇಖೆಗಿಂತ ಕೆಳಗಿದ್ದಾರೆ. ಅವರಲ್ಲಿ ವಿದ್ಯಾವಂತರು ಆತ್ಮಸ್ಥೈರ್ಯ ತುಂಬಬೇಕು. ಮುಂದುವರಿದ ಜನಾಂಗದ ಸರಿಸಮನಾಗಿ ನಿಲ್ಲಲು ಸಿದ್ಧರಾಗಬೇಕು ಎಂದರು.

ಶಾಸಕ ಟಿ.ಬಿ.ಜಯಚಂದ್ರ ಮಾತನಾಡಿ, ಮಕ್ಕಳನ್ನು ಪ್ರೋತ್ಸಾಹಿಸುವ ಕಾರ್ಯಕ್ರಮಗಳು ಹೆಚ್ಚಬೇಕು. ಜನಾಂಗದ ಮುಖಂಡರು ದೇಶದ ಏಳಿಗೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಮುನ್ನಡೆಯಬೇಕು ಎಂದರು.

ವಿಧಾನ ಪರಿಷತ್ ಸದಸ್ಯ ಡಾ.ದೊಡ್ಡರಂಗೇಗೌಡ ಮಾತನಾಡಿ, ಜಾಗತೀಕರಣವನ್ನು ಎದುರಿಸಲು ಶಿಕ್ಷಣವೊಂದೇ ಮದ್ದು. ಮಕ್ಕಳು ಜ್ಞಾನ ಹೆಚ್ಚಿಸಿಕೊಳ್ಳಬೇಕು, ಸಾಮಾಜಿಕ ಜವಾಬ್ದಾರಿ ನಿರ್ವಹಿಸಬೇಕು ಎಂದರು.

ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ವೂಡೆ ಪಿ.ಕೃಷ್ಣ ಡಾ.ಜಿ.ಟಿ.ಚಂದ್ರಪ್ಪ ,ಮಾಸ್ಟರ್ ಕಿಶನ್, ರಾಜ್ಯ ಚುನಾವಣೆ ಆಯೋಗದ ನಿವೃತ್ತ ಆಯುಕ್ತ ಚಿಕ್ಕಣ್ಣ ಕೆ.ಆರ್.ಎಸ್. ಫೌಂಡೇಷನ್‌ನ ಅಧ್ಯಕ್ಷ ಶ್ರೀನಿವಾಸಯ್ಯ, ನಿವೃತ್ತ ಡಿಡಿಪಿಐ ಎಂ.ನೀಲಯ್ಯ, ಭಕ್ತವತ್ಸಲಂ ಮತ್ತಿತರರು ಪಾಲ್ಗೊಂಡಿದ್ದರು.



**ಕುಂಚಿಟಿಗ ಒಕ್ಕಲಿಗ ವಿದ್ಯಾರ್ಥಿಗಳ ಪ್ರತಿಭಾ ಪುರಸ್ಕಾರ ಸಮಾರಂಭವನ್ನು ಶ್ರೀ ನಂಜಾವಧೂತ ಸ್ವಾಮೀಜಿ ಉದ್ಘಾಟಿಸಿದರು. ಡಾ.ದೊಡ್ಡರಂಗೇಗೌಡ, ವೂಡೆ ಪಿ. ಕೃಷ್ಣ ಚಿಕ್ಕಣ್ಣ ಎ.ಆರ್.ಶ್ರೀನಿವಾಸಯ್ಯ, ಡಾ.ಜಿ.ಟಿ.ಚಂದ್ರಪ್ಪ ಉಪಸ್ಥಿತರಿದ್ದರು.**

ಬೆಂಗಳೂರು ವಿಜಯ | ಶುಕ್ರವಾರ, 3 ಅಕ್ಟೋಬರ್ 2008

# ಅಧ್ಯಾಪಕರ ಸಾಧನೆ ವಿದ್ಯಾರ್ಥಿಗಳಿಗೆ ತಲುಪಲಿ

ಬೆಂಗಳೂರು: ವೃತ್ತಿಯಲ್ಲಿ ಎಷ್ಟೇ ಮೇಲೆ ಬಂದರೂ ಶಿಕ್ಷಕರ ಅಧ್ಯಯನ ಮಾತ್ರ ನಿಲ್ಲಬಾರದು ಎಂದು ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಪ್ರಿನ್ಸಿಪಾಲ್ ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ ಅಭಿಪ್ರಾಯ ಪಟ್ಟಿದ್ದಾರೆ.

ಎಂ.ಫಿಲ್ ಮತ್ತು ಪಿಎಚ್.ಡಿ. ಪದವಿ ಗಳಿಸಿದ ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಕಾಲೇಜು ಶಿಕ್ಷಕರಿಗೆ ಹಮ್ಮಿಕೊಂಡಿದ್ದ ಅಭಿನಂದನಾ ಸಮರಂಭದಲ್ಲಿ ಭಾಗವಹಿಸಿ ಮಾತನಾಡಿದರು.

ಅಧ್ಯಾಪಕ ವೃತ್ತಿಯಲ್ಲಿ ನಿರತರಾದವರು ಉನ್ನತ ವ್ಯಾಸಂಗದಲ್ಲಿ ತೊಡಗುವುದು ಅಪರೂಪ. ಉನ್ನತ ಶಿಕ್ಷಣದಲ್ಲಿ ತೊಡಗಬಯಸುವ ಶಿಕ್ಷಕರಿಗೆ ಪ್ರೋತ್ಸಾಹ ನೀಡುವ ಶಿಕ್ಷಣ ಸಂಸ್ಥೆಗಳು ಇನ್ನೂ ಅಪರೂಪ. ಹೀಗಾಗಿ ಇದೊಂದು ವೈಶಿಷ್ಟ್ಯಪೂರ್ಣ ಕಾರ್ಯಕ್ರಮ ಎಂದು ಅವರು ಹೇಳಿದರು.

ಜ್ಞಾನ ದಾಹದ ವಿಷಯದಲ್ಲಿ ಅಧ್ಯಾಪಕ ನಿರಂತರ ವಿದ್ಯಾರ್ಥಿಯಾಗಬೇಕು. ಜ್ಞಾನದ ಹಸಿವು ಯಾವತ್ತೂ ಹೊಂದಿರಬೇಕು. ಹೊಸ ವಿಷಯಗಳನ್ನು ತನ್ನ ಬೋಧನೆಯಲ್ಲಿ ಅಳವಡಿಸಿಕೊಳ್ಳಬೇಕು ಎಂದು ಅವರು ತಿಳಿಸಿದರು.

ಶಿಕ್ಷಣ ಸಂಸ್ಥೆ ಅಧ್ಯಕ್ಷ ಪಂಡಿತಾರಾಧ್ಯ ಮಾತನಾಡಿ, ಅಧ್ಯಾಪಕರು ಉನ್ನತ ಶಿಕ್ಷಣ ಪಡೆದರೆ, ಅದರ ಫಲ ಅವರ ಅಧ್ಯಾಪನದಲ್ಲಿ ವ್ಯಕ್ತವಾಗುತ್ತದೆ. ಸಂಸ್ಥೆಯ ಎಲ್ಲ ಅಧ್ಯಾಪಕರೂ ಡಾಕ್ಟರೇಟ್ ಪದವಿ ಗಳಿಸುವಂತಾಗಲಿ ಎಂದು ಹಾರೈಸಿದರು.

ಸಂಸ್ಥೆಯ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಮಾತನಾಡಿ, ಬೆಂಗಳೂರು ಮಾಹಿತಿ ತಂತ್ರಜ್ಞಾನದ ನೆಲೆ ಮಾತ್ರವಾಗಿರದೆ, ಜ್ಞಾನ ಮತ್ತು ಅಧ್ಯಯನದ ನೆಲೆಯೂ ಆಗಿದೆ. ಇದಕ್ಕೆ ನಮ್ಮ ಸಂಸ್ಥೆಯ ಅಧ್ಯಾಪಕರೇ ಸಾಕ್ಷಿ. ಅಧ್ಯಾಪಕರ ಎಲ್ಲ ಸಾಧನೆಗಳು ವಿದ್ಯಾರ್ಥಿಗಳನ್ನು ಮುಟ್ಟುವಂತಾಗಲಿ ಎಂದು ಆಶಿಸಿದರು.

ಸಮಾರಂಭದಲ್ಲಿ ಉನ್ನತ ಪದವಿ ಗಳಿಸಿದ 15 ಶಿಕ್ಷಕರನ್ನು ಸನ್ಮಾನಿಸಿಸಲಾಯಿತು. ಸಮಾರಂಭದಲ್ಲಿ ಕಾಲೇಜಿನ ಪತ್ರಿಕೋದ್ಯಮ ವಿಭಾಗ ಮುಖ್ಯಸ್ಥರಾದ ಭಾಗ್ಯಲಕ್ಷ್ಮಿ ಪದಕಿ ಹಾಜರಿದ್ದರು.



ಎಂ.ಫಿಲ್ ಮತ್ತು ಪಿಎಚ್.ಡಿ. ಪದವಿ ಗಳಿಸಿದ ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಕಾಲೇಜು ಶಿಕ್ಷಕರಿಗೆ ಹಮ್ಮಿಕೊಂಡಿದ್ದ ಅಭಿನಂದನಾ ಸಮಾರಂಭದಲ್ಲಿ ಪ್ರಾಧ್ಯಾಪಕ ನಾ.ಗೀತಾಚಾರ್ಯರನ್ನು ಅಭಿನಂದಿಸುತ್ತಿರುವ ಶಿಕ್ಷಣ ಸಂಸ್ಥೆ ಧರ್ಮದರ್ಶಿ ಎಸ್.ಆರ್. ಪಂಡಿತಾರಾಧ್ಯ, ವೂಡೆ ಪಿ.ಕೃಷ್ಣ ಪ್ರಿನ್ಸಿಪಾಲ್ ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ.



## ಬೆಂಗಳೂರು ಇತಿಹಾಸ ಮಾಲೆ

ಸುರೇಶ್ ಮೂನ sureshmoona@gmail.com

ಬೆಂಗಳೂರಿನ ಹೆಮ್ಮೆಯ ಸಂಸ್ಥೆಗಳು: ಶೇಷಾದ್ರಿಪುರಂ ಶಿಕ್ಷಣ ದತ್ತಿ

# ಶಿಕ್ಷಣ ಸಂಗೀತದ ಮಧುರ ಬಾಂಧವ್ಯ

ಬೆಂಗಳೂರಿನ ಅನೇಕ ಶಿಕ್ಷಣಸಂಸ್ಥೆಗಳಂತೆ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಶಿಕ್ಷಣ ಸಂಸ್ಥೆಗಳು ಸಹ ಎನ್‌ಸಿಸಿ, ಎನ್‌ಎಸ್‌ಎಸ್ ಸಂಘಟನೆಗಳ ಮೂಲಕ ಸಾಮಾಜಿಕ ಸೇವಾ ಯೋಜನೆಗಳಲ್ಲಿ ಪಾಲ್ಗೊಳ್ಳುತ್ತಿದ್ದರೂ, ಆ ಎಲ್ಲ ಶಿಕ್ಷಣ ಸಂಸ್ಥೆಗಳ ಪೈಕಿ ಈ ಸಂಸ್ಥೆ ಬಹಳ ಅಪರೂಪವೆನ್ನಿಸಿದೆ. ಅದೆಂದರೆ, ಈ ದತ್ತಿಯ ಸಹಯೋಗ ಮತ್ತು ಸಹಕಾರದೊಂದಿಗೆ ಶೇಷಾದ್ರಿಪುರಂ ರಾಮಸೇವಾ ಸಮಿತಿಯು ಕಳೆದ ಆರು ದಶಕಗಳಿಂದಲೂ ನಡೆಸುತ್ತಿರುವ ರಾಮೋತ್ಸವ. ಈ ಸಂಸ್ಥೆಯ ಆವರಣದಲ್ಲಿ ಜರುಗುತ್ತಿರುವ ಸಂಗೀತೋತ್ಸವದ ಕಾರ್ಯಕ್ರಮಗಳು ನಗರದ ಮೂಲೆ ಮೂಲೆಗಳಿಂದ ಬರುವ ಸಂಗೀತ ಪ್ರೇಮಿಗಳಿಗೆ ಶಾಸ್ತ್ರೀಯ ಸಂಗೀತದ ರಸದೌತಣವನ್ನೇ ಉಣಬಡಿಸುತ್ತಿದೆ. ದಕ್ಷಿಣ ಬೆಂಗಳೂರಿನ ಕೋಟೆ ಹೈಸ್ಕೂಲ್ ಆವರಣದಲ್ಲಿಯೂ ಶ್ರೀ ರಾಮಸೇವಾ ಮಂಡಳಿಯವರು ಆಯೋಜಿಸುವ ಸಂಗೀತೋತ್ಸವವು ನಡೆಯುತ್ತದಾದರೂ ಅಲ್ಲಿ ಶಿಕ್ಷಣ ಸಂಸ್ಥೆಯ ನೇರ ಪಾತ್ರವಿಲ್ಲ. ಆದರೆ ಶೇಷಾದ್ರಿಪುರಂ



ರಾಮಸೇವಾ ಸಮಿತಿಯಲ್ಲಿ ಈ ಶಿಕ್ಷಣ ದತ್ತಿಯ ಕೆಲವು ಪದಾಧಿಕಾರಿಗಳೂ ಇದ್ದು ಈ ಉತ್ಸವವು ಅವ್ಯಾಹತವಾಗಿ ಆರು ದಶಕಗಳ ಕಾಲ ನಡೆಸಿಕೊಂಡು ಬರಲು ಕಾರಣವಾಗಿದೆ. 2008ರ ಏಪ್ರಿಲ್‌ನಲ್ಲಿ ಇದರ ವಜ್ರ ಮಹೋತ್ಸವವೂ ವಿಜೃಂಭಣೆಯಿಂದ ನಡೆಯಿತು.

ಸಿ.ಡಿ.ಗೋಪಾಲ ಅಯ್ಯಂಗಾರ್ ಶೇಷಾದ್ರಿಪುರಂನಲ್ಲಿ ವಾಸವಾಗಿದ್ದ ಪ್ರಸಿದ್ಧ ವಾಣಿಜ್ಯೋದ್ಯಮಿ. ಇವರ ಮನೆಯ ಬಳಿ ಹಳೆಯ ಕಾಲದ ಶ್ರೀರಾಮನ ಗುಡಿ ಇತ್ತು. ಅಲ್ಲಿ ಶ್ರೀರಾಮ ದೇವರ ಹೆಸರಿನಲ್ಲಿ ಏನನ್ನಾದರೂ ಮಾಡಬೇಕೆಂಬ ಅಭಿಲಾಷೆಯಿಂದ ಇವರು ತಮ್ಮಂತೆ ಚಿಂತನೆ ಮಾಡುವ ಸ್ನೇಹಿತರಾದ ಜಿ. ನರಸಿಂಹ ಮೂರ್ತಿ, ಬಿ.ವಿ.ರಾಮರಾವ್, ನರಸಿಂಹರಾವ್ ಮಾನೆ, ವಿ.ಕೃಷ್ಣಮೂರ್ತಿ ಇವರುಗಳೊಂದಿಗೆ ಸೇರಿ 1949ರಲ್ಲಿ ಈ ಗುಡಿಯ ಬಳಿಯಲ್ಲೇ ರಾಮನವಮಿಯ ಸಮಯದಲ್ಲಿ ಸಣ್ಣ ಪ್ರಮಾಣದ ಸಂಗೀತ ಕಾರ್ಯಕ್ರಮವನ್ನು ಪ್ರಾರಂಭಿಸಿದರು. ಸ್ಥಳೀಯರಿಂದ ಉತ್ತಮ ಪ್ರತಿಕ್ರಿಯೆ ದೊರೆತಿದ್ದರಿಂದ ಇದಕ್ಕೆ ಶೇಷಾದ್ರಿಪುರಂ ರಾಮಸೇವಾ ಸಮಿತಿ ಎಂಬ ಹೆಸರಿಟ್ಟು ಕಾರ್ಯಕ್ರಮವನ್ನು ಪ್ರತಿ ವರ್ಷ ನಡೆಸಲು ನಿರ್ಧರಿಸಿದರು. ಮರುವರ್ಷ ಕಾರ್ಯಕ್ರಮಕ್ಕೆ ಬಂದ ಜನ ಹೆಚ್ಚಾಗಿ ಜಾಗ ಸಾಲದಾಯಿತು. ಸಿ.ಡಿ.ಗೋಪಾಲ್ ಅಯ್ಯಂಗಾರರು ಶೇಷಾದ್ರಿಪುರಂ ಎಜುಕೇಶನ್ ಅಸೋಸಿಯೇಷನ್ ಎಂಬ ಹೆಸರಿದ್ದ ಈ ದತ್ತಿಯ ಚೇರ್ಮನ್ ಆಗಿದ್ದರು. ಹೀಗಾಗಿ ಈ ಎರಡೂ ಸಂಸ್ಥೆಗಳ ನಡುವೆ ಬಾಂಧವ್ಯವನ್ನು ನಿರ್ಮಿಸಲು ಇವರಿಗೆ ಸುಲಭವಾಯಿತು. 1951ರ ರಾಮನವಮಿ ಸಂದರ್ಭದಲ್ಲಿ ಆಗ ನಿರ್ಮಾಣದ ಹಂತದಲ್ಲಿದ್ದ ಶಾಲಾ ಕಟ್ಟಡದ ಬಳಿಯಲ್ಲೇ ಇದ್ದ ವಿಶಾಲವಾದ ಜಾಗದಲ್ಲಿ ತಟ್ಟಿಗೆ ಛಾವಣಿಯ ತಾತ್ಕಾಲಿಕ ಸಭಾಂಗಣವನ್ನು ನಿರ್ಮಿಸಿ ಸಂಗೀತದ ಕಾರ್ಯಕ್ರಮವನ್ನು ಏರ್ಪಡಿಸಿದರು. ಆಗಿನಿಂದಲೂ ಈ ಕಾರ್ಯಕ್ರಮವು ಇದೇ ಸ್ಥಳದಲ್ಲಿ ಅತ್ಯಂತ ಅರ್ಥಪೂರ್ಣವಾಗಿ ಆಯೋಜಿಸಲ್ಪಡುತ್ತಿವೆ. ಹಾಗೆಯೇ ದತ್ತಿಯ ಕೆಲವು ಪದಾಧಿಕಾರಿಗಳು ರಾಮೋತ್ಸವ ಸಮಿತಿಯಲ್ಲೂ ಇರುವ ಪರಂಪರೆ ಇಂದಿಗೂ ಮುಂದುವರೆದಿದೆ. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಪ್ರಸುತ್ತ ಕಾರ್ಯದರ್ಶಿಗಳಾದ ವೂಡೆ ಪಿ. ಕೃಷ್ಣ ಅವರು ರಾಮಸೇವಾ ಸಮಿತಿಯ ಆಡಳಿತ ಮಂಡಳಿಯಲ್ಲಿ ಇದ್ದಾರೆ. ಇವೆಲ್ಲದರಿಂದಾಗಿ ಶಿಕ್ಷಣ ಮತ್ತು ಸಂಗೀತದ ಅಧಿ ದೇವತೆಯಾದ ಸರಸ್ವತಿಯ ಆರಾಧನೆ ಈ ಕಟ್ಟಡದಲ್ಲಿ ಅತ್ಯಂತ ಅರ್ಥಪೂರ್ಣವಾಗಿ ನೆರವೇರುತ್ತಿದೆ. ಕರ್ನಾಟಕ ಸಂಗೀತ ಕ್ಷೇತ್ರದಲ್ಲಿ ಪ್ರಸಿದ್ಧರೆನಿಸಿದ ಎಲ್ಲ ಹಿರಿಯ ವಿದ್ವಾಂಸರು ಈ ಸಭಾಂಗಣದಲ್ಲಿ ಕಛೇರಿ ನೀಡಿದ್ದಾರೆ. ಇಲ್ಲಿ ಕಾರ್ಯಕ್ರಮ ನೀಡುವುದು ತಮ್ಮ ಪಾಲಿನ ಭಾಗ್ಯ ಎಂಬುದೇ ಅವರೆಲ್ಲರ ಅಭಿಪ್ರಾಯ. ಹಾಗೆಯೇ ಅನೇಕ ಹೆಸರಾಂತ ಗಣ್ಯ ವ್ಯಕ್ತಿಗಳು ಶ್ರೋತೃಗಳಾಗಿ ಬಂದು ಕುಳಿತು ಇಲ್ಲಿನ ಸಂಗೀತಾರಾಧನೆಯನ್ನು ಆಸ್ವಾದಿಸಿದ್ದಾರೆ. ಅನೇಕ ಗಣ್ಯ ವ್ಯಕ್ತಿಗಳು ಇಲ್ಲಿಯ ಸಂಗೀತ ಸುಧೆಯನ್ನು ನೆನಪಿಸಿಕೊಳ್ಳುತ್ತಾರೆ.

ನಮ್ಮ ಸಂಸ್ಥೆ ಮತ್ತು ರಾಮೋತ್ಸವ ಸಮಿತಿ ಒಂದೇ ನಾಣ್ಯದ ಎರಡು ಮುಖಗಳಿದ್ದ ಹಾಗೆ. ಇದರಿಂದಾಗಿ ಕಳೆದ 6 ದಶಕಗಳಿಂದಲೂ ನಮ್ಮ ಸಂಸ್ಥೆಯ ಆವರಣದಲ್ಲಿ ಈ ಕಾರ್ಯಕ್ರಮಕ್ಕಾಗಿ ಎಲ್ಲ ವ್ಯವಸ್ಥೆಗಳನ್ನು ಅಚ್ಚುಕಟ್ಟಾಗಿ ಮಾಡಿಕೊಡುತ್ತೇವೆ. 1970ರ ದಶಕದಲ್ಲಿ ಉತ್ತಮವಾದ ವೇದಿಕೆಯುಳ್ಳ ಕುವೆಂಪು ಬಯಲು ರಂಗಮಂದಿರ ನಿರ್ಮಾಣವಾಯಿತು. ಹಿಂದಿನಂತೆ ಈಗಲೂ ಇಲ್ಲಿ ಬರುವವರು ಯಾವ ಬೇಧಭಾವವಿಲ್ಲದೆ ನೆಲದ ಮೇಲೆ ಕುಳಿತು ಸಂಗೀತವನ್ನು ಆಲಿಸುತ್ತಾರೆ. ನಮ್ಮ ಶಾಲಾ ಕಾಲೇಜುಗಳಿಗೆ ಮಕ್ಕಳನ್ನು ಸೇರಿಸುವ ಪೋಷಕರಲ್ಲಿ ಬಹುತೇಕ ಮಂದಿ ಸಂಗೀತಪ್ರಿಯರೇ. ಹೀಗೆ ಕಳೆದ ಆರು ದಶಕಗಳಿಂದಲೂ ಒಂದೇ ಸೂರಿನಡಿಯಲ್ಲಿ ಪೋಷಕರಿಗೆ ಸಂಗೀತವನ್ನು ಮಕ್ಕಳಿಗೆ ಶಿಕ್ಷಣವನ್ನು ನೀಡುತ್ತಿರುವ ಒಂದು ಅಪರೂಪದ ಸಂಸ್ಥೆ ಎನಬಹುದು ಎನ್ನುತ್ತಾರೆ ವೂಡೆ ಪಿ.ಕೃಷ್ಣರವರು.

ಈ ಬಾಂಧವ್ಯದಿಂದಾಗಿಯೇ ಶೇಷಾದ್ರಿಪುರಂ ಕಾಲೇಜಿನ ರಜತ ಮಹೋತ್ಸವ ಮತ್ತು ರಾಮಸೇವಾ ಸಮಿತಿಯ ಸುವರ್ಣ ಮಹೋತ್ಸವವನ್ನು ಒಟ್ಟಿಗೇ ಆಚರಿಸಲಾಯಿತು. 1998ರ ಏಪ್ರಿಲ್ 5ರಂದು ಕಾಲೇಜಿನ ರಜತ ಮಹೋತ್ಸವವನ್ನು ಮದ್ರಾಸ್ ಮ್ಯೂಸಿಕ್ ಅಕಾಡೆಮಿಯ ಅಧ್ಯಕ್ಷ ಡಿ.ಟಿ.ವಾಸು ಉದ್ಘಾಟಿಸಿದರು. ಪ್ರೊ। ಎಸ್.ಕೆ.ರಾಮಚಂದ್ರರಾಯರು ಅಧ್ಯಕ್ಷತೆ ವಹಿಸಿದ್ದರು. ಶತಮಾನದ ಹಿರಿಯರು ಎಂಬ ಶೀರ್ಷಿಕೆಯಲ್ಲಿ ಎಸ್. ನಿಜಲಿಂಗಪ್ಪ, ನಿಟ್ಟೂರು ಶ್ರೀನಿವಾಸ ರಾಯರು, ಡಾ। ಜಿ.ಕೆ.ನಾರಾಯಣರೆಡ್ಡಿ ಮೊದಲಾದ ಗಣ್ಯ ವ್ಯಕ್ತಿಗಳನ್ನು ಸನ್ಮಾನಿಸಲಾಯಿತು. ಒಂದು ವಾರದ ಕಾರ್ಯಕ್ರಮದ ನಂತರ ಅದೇ ತಿಂಗಳ 13ರಂದು ರಾಮೋತ್ಸವ ಸಮಿತಿಯ ಸುವರ್ಣ ಮಹೋತ್ಸವ ಉದ್ಘಾಟನೆಗೊಂಡಿತು. ಖ್ಯಾತ ಸಂಗೀತ ವಿಮರ್ಶಕರೂ, ಹಿರಿಯರೂ ಆಗಿದ್ದ ಬಿ.ವಿ.ಕೆ.ಶಾಸ್ತ್ರಿಯವರು ಈ ಕಾರ್ಯವನ್ನು ನೆರವೇರಿಸಿದರು. ಮೇ ತಿಂಗಳ 10ನೇ ತಾರೀಖಿನವರೆಗೆ ವೈವಿಧ್ಯಮಯ ಶಾಸ್ತ್ರೀಯ ಸಂಗೀತದ ಕಾರ್ಯಕ್ರಮಗಳು ನಡೆದವು.

■ ಮುಂದುವರೆಯುವುದು

ಈ ಸಂಜೆ

ಮಂಗಳವಾರ, 30 ಸೆಪ್ಟೆಂಬರ್, 2008




ನಗರದಲ್ಲಿಂದು ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ಘಟಕ ಹಾಗೂ ರಕ್ತನಿಧಿಯಿಂದ ಹಮ್ಮಿಕೊಂಡಿದ್ದ ರಕ್ತದಾನ ಅರಿವು ಜಾಥಾಕ್ಕೆ ವಿಧಾನ ಪರಿಷತ್ ಸಭಾಪತಿ ವೀರಣ್ಣ ಮತ್ತಿಕಟ್ಟಿ ಚಾಲನೆ ನೀಡಿದರು.

ಸಂಜೆವಾಣಿ ಮಂಗಳವಾರ 30 ಸೆಪ್ಟೆಂಬರ್ 2008



ಭಾರತೀಯ ರೆಡ್ ಕ್ರಾಸ್ ಸಂಸ್ಥೆ ನಗರದಲ್ಲಿ ಏರ್ಪಡಿಸಿದ್ದ ರಾಷ್ಟ್ರೀಯ ಸ್ವಯಂಪ್ರೇರಿತ ರಕ್ತದಾನ ದಿನಾಚರಣೆಯ ಜನಜಾಗೃತಿ ಜಾಥಾದಲ್ಲಿ ವಿಧಾನಪರಿಷತ್ ಸಭಾಪತಿ ವೀರಣ್ಣ ಮತ್ತಿಕಟ್ಟಿ ಅವರು ಪಾಲ್ಗೊಂಡಿದ್ದರು.

**ವಿಜಯ ಕರ್ನಾಟಕ**
ಮಂಗಳವಾರ, 30 ಸೆಪ್ಟೆಂಬರ್ 2008



ಭಾರತೀಯ ರೆಡ್ ಕ್ರಾಸ್ ಸಂಸ್ಥೆ: ರಕ್ತದಾನ ದಿನಾಚರಣೆ ಪ್ರಯುಕ್ತ ಜನಜಾಗೃತಿ ಜಾಥಾ. ಅತಿಥಿ: ವಿಧಾನ ಪರಿಷತ್ ಸಭಾಪತಿ ವೀರಣ್ಣ ಮತ್ತೀಕಟ್ಟಿ, ಅಧ್ಯಕ್ಷತೆ: ಪಿ. ಕೃಷ್ಣ, ಸ್ಥಳ: ರಾಜ್ಯ ಸರ್ಕಾರಿ ನೌಕರರ ಭವನ, ಬೆಳಗ್ಗೆ 10.

**DECCAN HERALD**
Tuesday, September 30, 2008

**Indian Red Cross Society:** Awareness rally on the eve of national Voluntary Blood Donation Day, Mahatma Gandhi Circle, M G Road, 10 am.

**ಕನ್ನಡಪ್ರಭ, ಮಂಗಳವಾರ, 30 ಸೆಪ್ಟೆಂಬರ್ 2008**

■ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ: ರಾಷ್ಟ್ರೀಯ ಸ್ವಯಂ ರಕ್ತದಾನ ದಿನ, ಜಾಗೃತಿಗಾಗಿ ಜಾಥಾ, ಮುಖ್ಯಅತಿಥಿ– ಸಭಾಪತಿ– ವೀರಣ್ಣ ಮತಿಕಟ್ಟಿ, ಅಧ್ಯಕ್ಷತೆ– ವೂಡೇ ಪಿ. ಕೃಷ್ಣ, ಮಹಾತ್ಮಗಾಂಧಿ ಪ್ರತಿಮೆ ಬಳಿ, ಎಂಜಿ ರಸ್ತೆ, ಬೆಳಗ್ಗೆ 10.

**ಪ್ರಜಾವಾಣಿ**
ಮಂಗಳವಾರ
30ನೇ ಸೆಪ್ಟೆಂಬರ್ 2008

ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ: ಮಹಾತ್ಮ ಗಾಂಧಿ ವೃತ್ತ, ಮಹಾತ್ಮ ಗಾಂಧಿ ರಸ್ತೆ. ರಾಷ್ಟ್ರೀಯ ಸ್ವಯಂ ಪ್ರೇರಿತ ರಕ್ತದಾನ ದಿನಾಚರಣೆ ನಿಮಿತ್ತ ಜಾಗೃತಿ ಜಾಥಾ. ಉದ್ಘಾಟನೆ- ವಿಧಾನ ಪರಿಷತ್ತಿನ ವಿರೋಧ ಪಕ್ಷದ ನಾಯಕ ವೀರಣ್ಣ ಮತ್ತಿಕಟ್ಟಿ. ಅಧ್ಯಕ್ಷತೆ- ಸೊಸೈಟಿ ರಾಜ್ಯ ಶಾಖೆಯ ಉಪಾಧ್ಯಕ್ಷ ವೂಡೆ ಪಿ.ಕೃಷ್ಣ. ಬೆಳಗ್ಗೆ 10.

**THE NEW INDIAN EXPRESS**
**TUESDAY, SEPTEMBER 30 | 2008 | BANGALORE**

INDIAN RED CROSS SOCIETY
Inauguration of awareness rally on the eve of National Voluntary blood donation day by Karnataka Legislative Council Veeranna Mathikatti, at Mahatma Gandhi Circle, M G Road, 10 am.

**THE HINDU • TUESDAY, SEPTEMBER 30, 2008**

**Indian Red Cross Society:** Awareness rally on the eve of National Voluntary Blood donation day, Chairman of Karnataka Legislative Council Veeranna Mathikatti, chief guest, Mahathma Gandhi Circle, M.G. Road, 10 a.m.

**ಉದಯವಾಣಿ**
30 ಸೆಪ್ಟೆಂಬರ್ 2008

ಭಾರತೀಯ ರೆಡ್ ಕ್ರಾಸ್ ಸಂಸ್ಥೆ: ಮಹಾತ್ಮ ಗಾಂಧಿ ವೃತ್ತ, ಎಂ.ಜಿ. ರಸ್ತೆ. ರಾಷ್ಟ್ರೀಯ ಸ್ವಯಂ ರಕ್ತದಾನ ದಿನಾಚರಣೆ ಅಂಗವಾಗಿ ಜನಜಾಗೃತಿ ಜಾಥಾ: ಉದ್ಘಾಟನೆ: ವಿಧಾನ ಪರಿಷತ್ ಸಭಾಪತಿ ವೀರಣ್ಣ ಮತ್ತೀಕಟ್ಟಿ. ಅಧ್ಯಕ್ಷತೆ: ಸಂಸ್ಥೆ ಉಪಸಭಾಧ್ಯಕ್ಷ ವೂಡೇ ಪಿ. ಕೃಷ್ಣ. ಬೆಳಗ್ಗೆ 10.

**ಸಂಯುಕ್ತ ಕರ್ನಾಟಕ**

**30-9-2008**



ಬೆಂಗಳೂರಿನ ಶೇಷಾದ್ರಿಪುರಂ ಕಾಲೇಜಿನ ಯುವ ರೆಡ್‌ಕ್ರಾಸ್ ಘಟಕವನ್ನು ಕರ್ನಾಟಕ ಚಿತ್ರಕಲಾ ಪರಿಷತ್ ಅಧ್ಯಕ್ಷ ಟಿ. ಪ್ರಭಾಕರ ಅವರು ಉದ್ಘಾಟಿಸಿದರು. ಕಾಲೇಜು ಸಂಸ್ಥೆ ಅಧ್ಯಕ್ಷ ಎನ್ ಆರ್ ಪಂಡಿತಾರಾಧ್ಯ, ರಾಜ್ಯ ರೆಡ್‌ಕ್ರಾಸ್ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ, ಗೌರವ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ. ಎನ್. ಜಿ. ನಾರಾಯಣ, ಕಾರ್ಯಕ್ರಮ ಅಧಿಕಾರಿ ಎಸ್. ಲತಾ, ಎನ್‌ಎಸ್‌ಎಸ್ ಅಧಿಕಾರಿ ಪ್ರತಾಪ ಲಿಂಗಯ್ಯ ಇತರರಿದ್ದರು

ಸೋಮವಾರ 29ನೇ ಸೆಪ್ಟೆಂಬರ್ 2008 ಪ್ರಜಾವಾಣಿ

# ಅಮೆರಿಕದಲ್ಲಿ ಕೆ.ಎಂ. ನಂಜಪ್ಪ ಸ್ಮರಣೆ



ನ್ಯೂಯಾರ್ಕ್‌ನಲ್ಲಿ ಇತ್ತೀಚೆಗೆ ನಡೆದ ಕೆ.ಎಂ. ನಂಜಪ್ಪ ಸ್ಮರಣೆ ಕಾರ್ಯಕ್ರಮದಲ್ಲಿ ಮಾಜಿ ಸಚಿವ ಪಿ.ಜಿ.ಆರ್. ಸಿಂಧ್ಯ ಮಾತನಾಡಿದರು. ಶಾಸಕ ಡಿ.ಹೇಮಚಂದ್ರ ಸಾಗರ್, ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ಕಾರ್ಯದರ್ಶಿ ವೂಡೆ ಪಿ.ಕೃಷ್ಣ, ಡಾ. ಬಿ. ವಿಶ್ವನಾಥ್, ಸತ್ಯ ವಿಶ್ವನಾಥ್ ಹಾಗೂ ಉದ್ಯಮಿ ಚಂದ್ರಶೇಖರ ರಾಜು ಚಿತ್ರದಲ್ಲಿದ್ದಾರೆ.

ನ್ಯೂಯಾರ್ಕ್: ಇತ್ತೀಚೆಗೆ ನಿಧನರಾದ ಹಲವು ಶಿಕ್ಷಣ ಸಂಸ್ಥೆಗಳ ಸ್ಥಾಪಕ ಹಾಗೂ ಬೆಂಗಳೂರಿನ ಮಾಜಿ ಮೇಯರ್ ಕೆ.ಎಂ. ನಂಜಪ್ಪ ಅವರಿಗೆ ಅಮೆರಿಕದ ನ್ಯೂಯಾರ್ಕ್ ಮತ್ತು ವಾಷಿಂಗ್ಟನ್ ಡಿಸಿ ನಗರಗಳಲ್ಲಿ ಪ್ರತ್ಯೇಕವಾಗಿ ನಡೆದ ಸಮಾರಂಭದಲ್ಲಿ ನುಡಿನಮನ ಸಲ್ಲಿಸಲಾಯಿತು.

ನ್ಯೂಯಾರ್ಕ್‌ನ ವುಡ್‌ಲ್ಯಾಂಡ್ ಹೋಟೆಲ್‌ನಲ್ಲಿ ನಡೆದ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಮಾತನಾಡಿದ ಮಾಜಿ ಸಚಿವ ಪಿ.ಜಿ.ಆರ್. ಸಿಂಧ್ಯ ಅವರು ನಂಜಪ್ಪನವರ ಸೇವೆ ಸ್ಮರಿಸಿ ಅವರೊಬ್ಬ ಆದರ್ಶ ಹಾಗೂ ಅನುಕರಣೀಯ ವ್ಯಕ್ತಿಯಾಗಿದ್ದರು ಎಂದರು. ಮಾನವತಾವಾದಿಯಾಗಿದ್ದ ನಂಜಪ್ಪನವರು ಶಿಕ್ಷಣಕ್ಕೆ ಹೆಚ್ಚು ಒತ್ತು ಕೊಟ್ಟವರು. ಈ ದಿಸೆಯಲ್ಲಿ ಹಲವು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಹಲವರಿಗೆ ದಾರಿದೀಪವಾದರು ಎಂದರು.

ಅವರ ಪುತ್ರಿ ಸತ್ಯವಿಶ್ವನಾಥ್ ಅವರ ಸಮಾಜ ಸೇವೆಯನ್ನು ಪರಿಗಣಿಸಿ ಕರ್ನಾಟಕ ಸರ್ಕಾರ ರಾಜ್ಯ ಪ್ರಶಸ್ತಿ ನೀಡಬೇಕು ಎಂದರು.

ಇನ್ನೊಬ್ಬ ಮುಖ್ಯ ಅತಿಥಿ ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ವೂಡೆ ಪಿ. ಕೃಷ್ಣ ಅವರು ಮಾತನಾಡಿ ಸೇವೆಗಾಗಿಯೇ ಬದುಕಿದ್ದ ನಂಜಪ್ಪ ಅವರು ಕೆಲಸದ ಮೂಲಕ ಮಾರ್ಗದರ್ಶನ ಮಾಡಿದವರು. ಹಾಗಾಗಿ ಕಾಯಕವೇ ಕೈಲಾಸ ತತ್ವದಲ್ಲಿ ಅಪಾರ ನಂಬಿಕೆ ಇಟ್ಟಿದ್ದನ ವ್ಯಕ್ತಿಯಾಗಿದ್ದರು ಎಂದರು. ಶಾಸಕ ಡಿ. ಹೇಮಚಂದ್ರ ಸಾಗರ್, ಉದ್ಯಮಿ ಚಂದ್ರಶೇಖರ ರಾಜು ಅವರು ನಂಜಪ್ಪನವರ ಸೇವೆ ಸ್ಮರಿಸಿದರು. ಸತ್ಯವತಿ ವಿಶ್ವನಾಥ್ ಸ್ವಾಗತಿಸಿದರು.

ಡಾ. ಬಿ. ವಿಶ್ವನಾಥ್, ಗುರುಪ್ರಸಾದ್ ದೇವನಹಳ್ಳಿ, ಕಿರಣ್‌ಕುಮಾರ್ ಮತ್ತಿತರರು ವೇದಿಕೆಯಲ್ಲಿದ್ದರು. ಬಿ.ಆರ್. ಸುರೇಂದ್ರ ವಂದನೆ ಸಲ್ಲಿಸಿದರು.

ವಾಷಿಂಗ್ಟನ್ ಡಿಸಿಯಲ್ಲಿ ಅಮೆರಿಕದ ಅಣುಶಕ್ತಿ ಆಯೋಗದ ಎಂಜಿನಿಯರ್ ಬಿ. ಜಗನ್ನಾಥ್ ಅವರ ಮನೆಯಲ್ಲಿ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಕಾವೇರಿ ಕನ್ನಡ ಸಂಘದ ಅಧ್ಯಕ್ಷ ಶಿವಭಟ್, ದೊಡ್ಡಣ್ಣ ರಾಜಶೇಖರ್, ಕಾವೇರಿ ಕೃಷ್ಣಮೂರ್ತಿ, ಗಾಯತ್ರಿ ಜಗನ್ನಾಥ್, ವೂಡೆ ಪಿ. ಕೃಷ್ಣ, ಕೆ.ಪಿ. ಮಂಜುನಾಥ ಸಾಗರ್, ಶಿವಾನಂದ, ಸೋಮಪ್ಪ, ಇ.ವಿ. ಸತ್ಯನಾರಾಯಣ ಅವರು ನಂಜಪ್ಪನವರ ಸೇವೆಯನ್ನು ಸ್ಮರಿಸಿದರು. ಬಿ. ಜಗನ್ನಾಥ್ ಸ್ವಾಗತಿಸಿದರು.

ಈ ಸಂಜೆ

ಭಾನುವಾರ 28 ಸೆಪ್ಟೆಂಬರ್ 2008




ರಾಜ್ಯ ರೆಡ್‌ಕ್ರಾಸ್ ಸಂಸ್ಥೆ ಬಿಹಾರ ಸಂತ್ರಸ್ತರಿಗಾಗಿ ಸಂಗ್ರಹಿಸಿರುವ ಪರಿಹಾರ ಸಾಮಗ್ರಿಗಳ ಸಾಗಣೆಗೆ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ ಚಾಲನೆ ನೀಡಿದರು. ಡಾ. ಎನ್. ಜೆ. ನಾರಾಯಣ, ಎ. ಆರ್. ಶ್ರೀನಿವಾಸಯ್ಯ, ಟಿ. ಪ್ರಭಾಕರ್, ಎಂ.ಎ. ರಾಮಚಂದ್ರ, ಮೀರಾ ಶಿವಲಿಂಗಯ್ಯ ಇದ್ದರು.

ಸಂಜೆವಾಣಿ ಭಾನುವಾರ 28 ಸೆಪ್ಟೆಂಬರ್ 2008




ಶೇಷಾದ್ರಿಪುರಂ ಕಾಲೇಜಿನಲ್ಲಿ ಯುವ ರೆಡ್‌ಕ್ರಾಸ್ ಘಟಕವನ್ನು ಚಿತ್ರಕಲಾ ಪರಿಷತ್ ಅಧ್ಯಕ್ಷ ಟಿ. ಪ್ರಭಾಕರ್ ಉದ್ಘಾಟಿಸಿದರು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ರಾಜ್ಯ ರೆಡ್‌ಕ್ರಾಸ್ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ, ಗೌರವಾಧ್ಯಕ್ಷ ರಾಜುಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಜಿ. ನಾರಾಯಣ, ಉಪಪ್ರಾಂಶುಪಾಲ, ಪ್ರೊ. ಎನ್.ಡಿ. ರಾಜನ್, ರೆಡ್‌ಕ್ರಾಸ್ ಕಾರ್ಯಕ್ರಮ ಅಧಿಕಾರಿ ಎಸ್. ಲತಾ ಇದ್ದಾರೆ.




ಶೇಷಾದ್ರಿಪುರಂ ಕಾಲೇಜಿನ ಯುವ ರೆಡ್ ಕ್ರಾಸ್ ಘಟಕವನ್ನು ಕರ್ನಾಟಕ ಚಿತ್ರಕಲಾ ಪರಿಷತ್ ಅಧ್ಯಕ್ಷ ಟಿ. ಪ್ರಭಾಕರ್ ಉದ್ಘಾಟಿಸಿದರು. ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ರೆಡ್ ಕ್ರಾಸ್ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ ಕೋಶಾಧ್ಯಕ್ಷ ರಾಜುಚಂದ್ರಶೇಖರ್, ಡಾ.ಎನ್.ಜಿ. ನಾರಾಯಣ, ಪ್ರೊ.ಎಂ.ಡಿ. ರಾಜಣ್ಣ ಮತ್ತಿತರರಿದ್ದರು.




ಬಿಹಾರ ಪ್ರವಾಹ ಸಂತ್ರಸ್ತರಿಗಾಗಿ ಫಿಲಿಪ್ಸ್ ಇಂಡಿಯಾ ಸಂಸ್ಥೆ ಭಾರತೀಯ ರೆಡ್‌ಕ್ರಾಸ್‌ಗೆ 2.5 ಲಕ್ಷ ರೂ. ನೆರವು ನೀಡಿತು. ಸಂಸ್ಥೆಯ ಮುಖ್ಯಾಧಿಕಾರಿ ಅಲೆಕ್ಸ್ ಕೊಲೇಟ್ ಚೆಕ್ ಹಸ್ತಾಂತರಿಸಿದರು. ರೆಡ್‌ಕ್ರಾಸ್‌ನ ವೂಡೇ.ಪಿ.ಕೃಷ್ಣ, ರಾಜುಚಂದ್ರಶೇಖರ್ ಮತ್ತಿತರರಿದ್ದರು.



## ಬೆಂಗಳೂರು ಇತಿಹಾಸ ಮಾಲೆ

ಸುರೇಶ್ ಮೂನ *sureshmoona@gmail.com*

# ಸಂಚಯಿಕಾ ಬ್ಯಾಂಕ್

**ಶೇ**ಷಾದ್ರಿಪುರಂ ಶಿಕ್ಷಣ ಸಂಸ್ಥೆಯಲ್ಲಿ ಸುವರ್ಣ ಮಹೋತ್ಸವವನ್ನು ಆಚರಿಸಿದ ಭಾರತ ಸೇವಾದಳದ ಸರ್ವೋದಯ ಶಾಖೆ ಇರುವ ಹಾಗೆ ಎನ್‌ಎಸ್‌ಎಸ್ ಮತ್ತು ಎನ್‌ಸಿಸಿ ಸೇವಾ ಘಟಕಗಳೂ ಇದ್ದು ಅವೂ ಸಹ ಸಮಾಜದ ನಾನಾ ರಚನಾತ್ಮಕ ಯೋಜನೆಗಳನ್ನು ಕೈಗೊಂಡು ಸಂಸ್ಥೆಗೆ ಒಳ್ಳೆಯ ಹೆಸರನ್ನು ತಂದುಕೊಟ್ಟಿವೆ. ಈ ಶಿಕ್ಷಣ ದತ್ತಿಯ ಶೇಷಾದ್ರಿಪುರಂ ಸ್ತ್ರೀಸಮಾಜದ ಮಾಧ್ಯಮಿಕ ಶಾಲೆಯಂತೂ ಬೆಂಗಳೂರಿನ ಶಿಕ್ಷಣ ಕ್ಷೇತ್ರದಲ್ಲೇ ಒಂದು ಅಪರೂಪದ್ದನ್ನಬಹುದಾದ ಯೋಜನೆಯನ್ನು ಕಳೆದ ಮೂರೂವರೆ ದಶಕಗಳಿಂದಲೂ ಯಶಸ್ವಿಯಾಗಿ ನಡೆಸಿಕೊಂಡು ಬಂದಿದೆ. ಅದೇ ಈ ಶಾಲೆಯ ಸಂಚಯಿಕಾ ಬ್ಯಾಂಕ್. ಇಂದಿನ ನಮ್ಮ ಸಮಾಜದಲ್ಲಿ ಅದರಲ್ಲೂ ಬೆಂಗಳೂರಿನಂತಹ ನಗರ ಪ್ರದೇಶಗಳಲ್ಲಿ ಸಂಪಾದನೆಗಿಂತ ಹೆಚ್ಚು ಖರ್ಚು ಮಾಡುವ, ಕೊಳ್ಳುಬಾಕತನದ, ಸಾಲ ಮಾಡಿಯಾದರೂ ತುಪ್ಪ ತಿನ್ನುವ ಸಂಸ್ಕೃತಿ ಹರಡುತ್ತಿರುವಾಗ ಚಿಕ್ಕ ವಯಸ್ಸಿನಲ್ಲೇ ಹಣವನ್ನು ಉಳಿತಾಯ ಮಾಡುವ ಪ್ರವೃತ್ತಿಯನ್ನು ಈ ಶಾಲೆಯು ಬೆಳೆಸುತ್ತಿರುವುದು ಅತ್ಯಂತ ಶ್ಲಾಘನೀಯ ಸಂಗತಿ. 1970ರ ದಶಕದ ಪ್ರಾರಂಭದಲ್ಲೇ ಈ ಯೋಜನೆಯ ಬಗ್ಗೆ ಚಿಂತಿಸಿದ ಶಾಲೆಯ ಮುಖ್ಯಸ್ಥರು ಮಕ್ಕಳಲ್ಲಿ ಚಿಕ್ಕವಯಸ್ಸಿನಲ್ಲೇ ತಮಗೆ ಸಿಗುವ ಪುಡಿಗಾಸನ್ನೇ ಉಳಿತಾಯ ಮಾಡಿಕೊಂಡು ಬಂದರೆ ಸ್ವಲ್ಪ ಕಾಲದಲ್ಲೇ ಅದೇ ಒಂದು ದೊಡ್ಡ ಪ್ರಮಾಣದ ಹಣವಾಗಿ ಆಪತ್ಕಾಲಕ್ಕೆ ಅಥವಾ ಅವಶ್ಯಕತೆ ಇರುವ ಸಮಯಕ್ಕೆ ನೆರವಾಗುವುದೆಂಬ ಅರಿವು ಮೂಡಿಸುವ ಸಲುವಾಗಿ 1972ರ ಡಿಸೆಂಬರ್ 20ರಂದು ಸಂಚಯಿಕಾ ಬ್ಯಾಂಕ್ ಪ್ರಾರಂಭವಾಯಿತು. ಪ್ರತಿ ವರ್ಷವೂ ಈ ಶಾಲೆಯಲ್ಲಿರುವ ಮತ್ತೊಂದು ಸಂಘಟನೆ ಗಣಿತ ಸಂಘಕ್ಕೆ ಆಯ್ಕೆಯಾದ ಏಳನೇ ತರಗತಿಯ ವಿದ್ಯಾರ್ಥಿಗಳಿಂದ ಒಬ್ಬ ಉಪಾಧ್ಯಾಯರ ನೇತೃತ್ವದಲ್ಲಿ ಮತ್ತು ಮುಖ್ಯೋಪಾಧ್ಯಾಯರ ಮಾರ್ಗದರ್ಶನದಲ್ಲಿ ಈ ಬ್ಯಾಂಕ್ ಕಾರ್ಯನಿರ್ವಹಿಸುತ್ತದೆ. 5,6 ಮತ್ತು 7ನೇ ತರಗತಿಯ ವಿದ್ಯಾರ್ಥಿಗಳು ಇದರ ಸದಸ್ಯತ್ವವನ್ನು ಪಡೆಯಬಹುದು. ಹಣವನ್ನು ಬ್ಯಾಂಕ್‌ನಲ್ಲಿ ಪ್ರತಿ ಶನಿವಾರವೂ ತೊಡಗಿಸಲು ಅವಕಾಶವುಂಟು. ವಿದ್ಯಾರ್ಥಿಗಳಿಗೆ ಅತ್ಯಂತ ಅಗತ್ಯವಿದ್ದಾಗ ಅವರು ಉಳಿತಾಯ ಮಾಡಿದ ಹಣದಲ್ಲಿ ಸ್ವಲ್ಪ ಭಾಗವನ್ನು ಅವರಿಗೆ ಕೊಡಲಾಗುತ್ತದೆ. ಏಳನೇ ತರಗತಿಯ ತೇರ್ಗಡೆ ಯಾದ ನಂತರ ಶಾಲೆಯನ್ನು ಬಿಡುವಾಗ ಇವರು ತಮ್ಮ ಖಾತೆಯಲ್ಲಿರುವ ಹಣವನ್ನು ಹಿಂದಕ್ಕೆ ಪಡೆಯಬಹುದು. ಹೀಗೆ ಮಕ್ಕಳು ಉಳಿತಾಯ ಮಾಡಿದ ಹಣವನ್ನು ಶೇಷಾದ್ರಿಪುರಂ ಅಂಚೆ ಕಚೇರಿಯಲ್ಲಿ ಎಸ್.ಬಿ. ಅಕೌಂಟ್ ಸಂಖ್ಯೆ 2062075ರಲ್ಲಿ ಇಡಲಾಗಿದೆ. ಕಳೆದ ವರ್ಷದ ಕೊನೆಯ ವೇಳೆಗೆ ಹೀಗೆ ಈ ಬ್ಯಾಂಕ್‌ನಲ್ಲಿ ಇಡಲಾಗಿರುವ ಹಣದ ಒಟ್ಟು ಮೊತ್ತ 92,735 ರೂಗಳು ಮತ್ತು 65 ಪೈಸೆಗಳಾಗಿವೆ. ಪ್ರತಿ ವರ್ಷವೂ ಹೀಗೆ ಜಮಾ ಮಾಡಿದ ಹಣದಿಂದ ಬಡ್ಡಿ ಬರುತ್ತಾದರೂ ಅದನ್ನು ಮಕ್ಕಳಿಗೆ ಕೊಡುವುದಿಲ್ಲ. ಬದಲಾಗಿ ಒಂದರಿಂದ ನಾಲ್ಕನೇ ತರಗತಿಯಲ್ಲಿ ಓದುವ ಕನ್ನಡ ಮಾಧ್ಯಮದ ಮಕ್ಕಳಿಗೆ ಉಚಿತವಾಗಿ ಪುಸ್ತಕ ಮತ್ತಿತರ ಅವಶ್ಯಕತೆಗಳನ್ನು ಪೂರೈಸಲಾಗುತ್ತದೆ. ಹೀಗಾಗಿ ಉಳಿತಾಯ ಮಾಡಿದ ಮಕ್ಕಳಿಗೆ ತಮಗೆ ಬಡ್ಡಿ ಬರಲಿಲ್ಲವೆಂಬ ನಿರಾಸೆಯಾಗುವುದಿಲ್ಲ ಬದಲಾಗಿ ತಮ್ಮ ಉಳಿತಾಯದ ಹಣದಿಂದ ಸತ್ಕಾರ್ಯವಾಯಿತೆಂಬ ತೃಪ್ತಿ, ಸಂತೋಷ ದೊರಕುತ್ತದೆ. ಇದು ಇತರ ವಿದ್ಯಾರ್ಥಿಗಳಿಗೂ ಸ್ಫೂರ್ತಿ ನೀಡಿ ಹೆಚ್ಚಿನ ವಿದ್ಯಾರ್ಥಿಗಳು ತಮಗೆ ದೊರೆಯುವ ಅಲ್ಪ ಸ್ವಲ್ಪ ಹಣವನ್ನೇ ಇದರಲ್ಲಿ ತೊಡಗಿಸಲು ಮುಂದಾಗುತ್ತಿದ್ದಾರೆ. ಪ್ರತಿ ವರ್ಷವೂ ಹೆಚ್ಚು ಉಳಿತಾಯ ಮಾಡಿದ ವಿದ್ಯಾರ್ಥಿಗಳಿಗೆ ಬಹುಮಾನಗಳನ್ನೂ ನೀಡಲಾಗುತ್ತದೆ. 2007ರಲ್ಲಿ ಏಳನೇ ತರಗತಿಯ ಪ್ರವೇಶ್ ವಿ.ಎಸ್. 6500ರೂಗಳನ್ನು ಆರನೆಯ ತರಗತಿಯ ಅಜಯ್ ಜಿ.ಎಮ್ 6000 ರೂಗಳನ್ನು ಹಾಗು ಏಳನೇ ತರಗತಿಯ ಸ್ವಪ್ನ ಕೆ. 2020ರೂಗಳನ್ನು ನೀಡಿ ವರ್ಷದ ಅತಿ ಹೆಚ್ಚು ಉಳಿತಾಯ ಮಾಡಿದ ವಿದ್ಯಾರ್ಥಿಗಳಾಗಿದ್ದಾರೆ. ಈ ಯೋಜನೆಯನ್ನು ಶಾಲೆಯ ಆಡಳಿತ ವರ್ಗ, ರಾಷ್ಟ್ರೀಯ ಉಳಿತಾಯ ಸಂಸ್ಥೆಯ ಅಧಿಕಾರಿಗಳೂ, ಶಿಕ್ಷಣ ಇಲಾಖೆಯ ಅಧಿಕಾರಿಗಳು ಆಗಾಗ್ಗ ಬಂದು ತನಿಖೆ ಮಾಡಿ ಉತ್ತಮ ರೀತಿಯಲ್ಲಿ ನಿರ್ವಹಿಸಲ್ಪಡುತ್ತಿರುವ ಈ ಬ್ಯಾಂಕ್‌ನ ಬಗ್ಗೆ ಮೆಚ್ಚುಗೆ ಸೂಚಿಸಿದ್ದಾರೆ. ರಾಷ್ಟ್ರೀಯ ಉಳಿತಾಯ ಸಂಸ್ಥೆಯು 1988ರಿಂದಲೇ ಈ ಶಾಲೆಯ ಸಂಚಯಿಕಾ ಬ್ಯಾಂಕ್‌ನ್ನು ಉತ್ತಮ ಬ್ಯಾಂಕ್ ಎಂದು ಪರಿಗಣಿಸಿದೆ. ಪ್ರತಿ ವರ್ಷವೂ ಸಂಚಯಿಕಾ ದಿನವನ್ನು ಆಚರಿಸಿ ಅಂದು ಉಳಿತಾಯದ ಮಹತ್ವವನ್ನು ತಿಳಿಸುವುದಲ್ಲದೆ ಬಹುಮಾನ ವಿತರಣೆಯೂ ನಡೆಯುತ್ತದೆ. 2007ರ ಸೆಪ್ಟೆಂಬರ್ 20ರಂದು ರಾಜ್ಯ ಮಟ್ಟದ ಸಂಚಯಿಕಾ ದಿನಾಚರಣೆಯನ್ನು ಮೈಸೂರು ರಸ್ತೆಯ ಶ್ರೀ ಶಾರದಾ ವಿದ್ಯಾಪೀಠ ಹೈಸ್ಕೂಲಿನಲ್ಲಿ ಆಚರಿಸಲಾಯಿತು. ಅಂದು ಕೇಂದ್ರ ಸರ್ಕಾರದ ನ್ಯಾಷನಲ್ ಸೇವಿಂಗ್ ಇನ್‌ಸ್ಟಿಟ್ಯೂಟ್‌ನವರು ಈ ಸಂಸ್ಥೆಯ ಸಂಚಯಿಕಾ ಶಿಕ್ಷಕರಾದ ಬಿ.ಟಿ.ತಿಮ್ಮಪ್ಪ ಅವರು ಹೆಚ್ಚು ಮಕ್ಕಳನ್ನು ಉಳಿತಾಯ ಯೋಜನೆಯಲ್ಲಿ ತೊಡಗಿಸಿದುದ್ದಕ್ಕಾಗಿ ಸನ್ಮಾನಿಸಿದರು. ನಮ್ಮ ಸಂಸ್ಥೆಗಳಲ್ಲಿ ನಡೆಯುತ್ತಿರುವ ಕೆಲವು ಅಪರೂಪದ ಯೋಜನೆಗಳ ಪೈಕಿ ಸಂಚಯಿಕಾ ಬ್ಯಾಂಕ್ ಕೂಡ ಒಂದಾಗಿದೆ. ಕಳೆದ ಮೂರು ದಶಕಗಳಿಂದ ಶೇಷಾದ್ರಿಪುರಂ ಸ್ತ್ರೀ ಸಮಾಜದ ಮಾಧ್ಯಮಿಕ ಶಾಲೆಯ ಮುಖ್ಯೋಪಾಧ್ಯಾಯರು ಹಾಗು ಉಪಾಧ್ಯಾಯರು ತಮ್ಮ ಮಕ್ಕಳಲ್ಲಿ ಉಳಿತಾಯ ಪ್ರವೃತ್ತಿಯನ್ನು ಅತ್ಯಂತ ಯಶಸ್ವಿಯಾಗಿ ರೂಢಿಸಿದ್ದಾರೆ. ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳೂ ಈ ಯೋಜನೆಯಲ್ಲಿ ತೊಡಗಿದ್ದಾರೆ. ಇವರೆಲ್ಲರಿಗೂ ನಮ್ಮ ಆಡಳಿತ ಮಂಡಳಿ ಅಪಾರ ಮೆಚ್ಚುಗೆ ಸೂಚಿಸುತ್ತದೆ ಎನ್ನುತ್ತಾರೆ ಸಂಸ್ಥೆಯ ಕಾರ್ಯದರ್ಶಿಗಳಾದ ವೂಡೆ ಪಿ ಕೃಷ್ಣರವರು. ಈ ಶಾಲೆಯಲ್ಲಿ ಉಳಿತಾಯ ಯೋಜನೆಯಲ್ಲಿ ತೊಡಗಿದ ಮಕ್ಕಳು ಇಂದು ದೊಡ್ಡವರಾಗಿ ವಿವಿಧ ಹುದ್ದೆಗಳಲ್ಲಿ ಇದ್ದರೂ ಹಣವನ್ನು ಉಳಿಸುವ ಸ್ವಭಾವ ತಮ್ಮಲ್ಲಿ ಬೇರೂರುಬಿಟ್ಟಿದೆ. ಇದಕ್ಕಾಗಿ ಈ ಸಂಸ್ಥೆಗೆ ನಾವು ಕೃತಜ್ಞತೆ ಸಲ್ಲಿಸುತ್ತೇವೆನ್ನುತ್ತಾರೆ. ಇಂದಿನ ಪರಿಸ್ಥಿತಿಯಲ್ಲಿ ಹಿರಿಯರಲ್ಲೂ ಸಹ ಉಳಿತಾಯ ಮಾಡುವ ಸ್ವಭಾವ ಕಡಿಮೆಯಾಗಿ ಕ್ರೆಡಿಟ್ ಕಾರ್ಡ್‌ಗಳು, ಬ್ಯಾಂಕ್‌ನ ಸಾಲಗಳು ಮುಂತಾದವುಗಳ ಮೂಲಕ ಹೆಚ್ಚು ಹಣವನ್ನು ಪಡೆದು ಖರ್ಚು ಮಾಡಿ ಅದನ್ನು ಹಿಂತಿರುಗಿಸಲು ಹೆಣಗಾಡುವ ಹಿನ್ನಲೆಯಲ್ಲಿ ಈ ಶಾಲೆಯ ಸಂಚಯಿಕಾ ಬ್ಯಾಂಕ್ ನಿಜಕ್ಕೂ ಒಂದು ಮಾದರಿಯಾಗಿದೆ. ಎಲ್ಲಾ ಶಾಲಾ ಕಾಲೇಜುಗಳಲ್ಲೂ ಈ ರೀತಿ ಬ್ಯಾಂಕ್‌ನ್ನು ನಡೆಸುವ ಯೋಜನೆಯು ಖಡ್ಡಾಯವಾದರೆ ಬಹುಷಃ ನಮ್ಮ ಮುಂದಿನ ಜನಾಂಗವಾದರೂ ಸಾಲದ ಚಕ್ರವ್ಯೂಹದಲ್ಲಿ ಸಿಲುಕುವುದನ್ನು ತಪ್ಪಿಸಬಹುದೇನೋ.

■ ಮುಂದುವರೆಯುವುದು




ಸಂಚಯಿಕಾ ದಿನಾಚರಣೆ

ಸಂಜೆವಾಣಿ ಸೋಮವಾರ 22 ಸೆಪ್ಟೆಂಬರ್ 2008




ರಾಜ್ಯ ರೆಡ್‌ಕ್ರಾಸ್ ಉಪಾಧ್ಯಕ್ಷ ವೊಡೇ ಪಿ. ಕೃಷ್ಣ ಅವರು ಬಿಹಾರ್ ಪ್ರವಾಹ ಸಂತ್ರಸ್ತರಿಗೆ ಪರಿಹಾರ ಸಾಮಗ್ರಿಗಳ ರವಾನೆಗೆ ಸೋಮವಾರ ಚಾಲನೆ ನೀಡಿದರು. ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ, ಮಂಡಳಿ ಸದಸ್ಯರಾದ ಎ.ಆರ್. ಶ್ರೀನಿವಾಸಯ್ಯ, ಟಿ. ಪ್ರಭಾಕರ್, ಎಂ.ವಿ. ರಾಮಚಂದ್ರ, ಅಶೋಕ್ ಕುಮಾರ್, ಮೀರಾ ಶಿವಲಿಂಗಯ್ಯ, ಪಿ. ಕೃಷ್ಣಮೂರ್ತಿ ಇತರರು ಇದ್ದಾರೆ.

ಸೆಪ್ಟೆಂಬರ್ 21, 2008 ಉದಯವಾಣಿ

# ಪರಿಹಾರ ಸಾಮಗ್ರಿ ರವಾನೆ




ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆ ವತಿಯಿಂದ ಬಿಹಾರ ಪ್ರವಾಹ ಸಂತ್ರಸ್ತರಿಗೆ ಪರಿಹಾರ ಸಾಮಗ್ರಿಗಳ ರವಾನೆ ಸಂಸ್ಥೆಯ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ ಅವರು ಚಾಲನೆ ನೀಡಿದರು. ಈ ಸಂದರ್ಭದಲ್ಲಿ ಡಾ। ಎನ್.ಜಿ. ನಾರಾಯಣ, ಎ.ಆರ್. ಶ್ರೀನಿವಾಸಯ್ಯ, ಟಿ. ಪ್ರಭಾಕರ್, ಎಂ.ಎ. ರಾಮಚಂದ್ರ, ಅಶೋಕ್ ಕುಮಾರ್, ಮೀರಾ ಶಿವಲಿಂಗಯ್ಯ, ನಳಿನಾಕ್ಷಿ ಸಣ್ಣಪ್ಪ, ಪಿ. ಕೃಷ್ಣಮೂರ್ತಿ ಉಪಸ್ಥಿತರಿದ್ದರು.

ಸೆಪ್ಟೆಂಬರ್ 21, 2008 ಉದಯವಾಣಿ

# 'ವಂದೇ ಮಾತರಂ' ಓಟ



ಶೇಷಾದ್ರಿಪುರ ಪ್ರೌಢಶಾಲೆಯಲ್ಲಿ 150 ವರ್ಷಗಳ ಸ್ವಾತಂತ್ರ್ಯ ಚಳವಳಿ 1857ರ ನೆನಪಿಗಾಗಿ 'ವಂದೇ ಮಾತರಂ ಓಟ' ಕಾರ್ಯಕ್ರಮ ಇತ್ತೀಚೆಗೆ ನಡೆಯಿತು. ಬಳ್ಳಾರಿಯ ಮಲ್ಲಸಜ್ಜನ ವ್ಯಾಯಾಮ ಶಾಲೆ ವಿದ್ಯಾರ್ಥಿಗಳು ಅಂಡಮಾನ್‌ನಿಂದ ತಂದಿದ್ದ ಸ್ವಾತಂತ್ರ್ಯ ಜ್ಯೋತಿಯನ್ನು ಸ್ವಾತಂತ್ರ್ಯ ಯೋಧ ಎಸ್.ವಿ. ಮಂಜುನಾಥ್, ಗಾಂಧೀವಾದಿ ಸತ್ಯವ್ರತ, ಶಾಸಕ ಸೋಮಶೇಖರರೆಡ್ಡಿ, ಸಂಸ್ಥೆಯ ಗೌರವ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಸ್ವೀಕರಿಸಿದರು. ಭಾರತ ಸೇವಾದಲ ಕೇಂದ್ರ ಸಮಿತಿ ಅಧ್ಯಕ್ಷ ಎಚ್.ಎಂ. ಗುರುಸಿದ್ದಸ್ವಾಮಿ, ಶಾಲಾ ಅಭಿವೃದ್ಧಿ ಅಧ್ಯಕ್ಷ ಕೆ. ಕೃಷ್ಣಸ್ವಾಮಿ, ಮುಖ್ಯ ಶಿಕ್ಷಕಿ ವಿನಯ ಸುವರ್ಣ, ಸ್ತ್ರೀ ಸಮಾಜ ಶಾಲೆಯ ಮುಖ್ಯ ಶಿಕ್ಷಕಿ ಎಂ. ಗೀತಾ ಉಪಸ್ಥಿತರಿದ್ದರು.

ಕನ್ನಡಪ್ರಭ, ಭಾನುವಾರ, 21 ಸೆಪ್ಟೆಂಬರ್ 2008



## ಸಾಂಸ್ಕೃತಿಕ ಕಾರ್ಯಕ್ರಮ

ಮಾಗಡಿ ರಸ್ತೆಯ ಶೇಷಾದ್ರಿಪುರ ವಾಣಿಜ್ಯ ಕಾಲೇಜಿನಲ್ಲಿ ನಡೆದ ಸಾಂಸ್ಕೃತಿಕ ಕಾರ್ಯಕ್ರಮವನ್ನು ಸಾಹಿತಿ ಪ್ರೊ|ಬರಗೂರು ರಾಮಚಂದ್ರಪ್ಪ ಉದ್ಘಾಟಿಸಿದರು. ಪಂಡಿತಾರಾಧ್ಯ, ವೂಡೇ ಪಿ ಕೃಷ್ಣ, ಸರೋದ ನಂಜಪ್ಪ, ಎಸ್.ಶೇಷನಾರಾಯಣ ಹಾಜರಿದ್ದರು.

RNI, KAR KAN 09026/10/1/96-TC-1, REGISTERED NO.: MNG-169/2006-2008





ಲೆಸ್ಟರ್(ಲಂಡನ್): ಕರ್ನಾಟಕ ರಾಜ್ಯದಲ್ಲಿ ಅಸಂಖ್ಯಾತ ಪ್ರವಾಸಿ ತಾಣಗಳಿವೆ. ಜಗತ್ತೇ ನಿಬ್ಬೆರಗಾಗಿ ನೋಡುವಂಥವಿವೆ. ಅವರ ಜಾಗತಿಕ ಮಟ್ಟದಲ್ಲಿ ಅವುಗಳನ್ನು ಗುರುತಿಸಿಕೊಳ್ಳಬೇಕಾಗಿವೆ. ಸರಕಾರ ಅಂಥ ತಾಣಗಳನ್ನು ಅಭಿವೃದ್ಧಿ ಪಡಿಸಲು ಯೋಜನೆ ಹಾಕಿಕೊಂಡಿದೆ. ಖಾಸಗಿಯವರೊಂದಿಗೆ ಒಪ್ಪಂದ ಮಾಡಿಕೊಂಡು ಜಂಟಿ ಸಹಯೋಗದಲ್ಲಿ ಯೋಜನೆಯನ್ನು ಜಾರಿಗೆ ತರುವ ದಿಸೆಯಲ್ಲಿ ಚಿಂತನೆ ನಡೆಸುತ್ತಿದೆ ಎಂದು ಕರ್ನಾಟಕ ಪ್ರವಾಸೋದ್ಯಮ ಸಚಿವ ಜಿ.ಜನಾರ್ದನ ರೆಡ್ಡಿ ಹೇಳಿದರು.

ಅಮೇರಿಕಾ ಹಾಗೂ ಇಂಗ್ಲೆಂಡ್ ದೇಶಗಳ ಕೆಲವಾರು ನಗರಗಳಲ್ಲಿ ರಾಜ್ಯದ ಪ್ರವಾಸಿ ತಾಣಗಳನ್ನು ಪರಿಚಯಿಸುವ ಕಾರ್ಯಕ್ರಮಗಳ ಅಂಗವಾಗಿ ನಿಯುಕ್ತವಾದ ಅಧಿಕಾರಿಗಳೊಂದಿಗೆ ಪ್ರವಾಸದಲ್ಲಿರುವ ಅವರು ಪತ್ರಿಕಾಗೋಷ್ಠಿಯಲ್ಲಿ ಮಾತನಾಡಿದರು.

ಕರ್ನಾಟಕ ಸರಕಾರದ ಸಹಾಯ ಕಾರ್ಯರೂಪಕ್ಕೆ ಬರಲು ಅನಿವಾಸಿ ಕನ್ನಡಿಗರ ಸಹಾಯ-ಸಹಕಾರ ದೊಡ್ಡ ಪ್ರಮಾಣದಲ್ಲಿ ಒದಗುತ್ತದೆ ಎಂದೂ ಅವರು ವಿಶ್ವಾಸ ವ್ಯಕ್ತ ಪಡಿಸಿದರು.

ಸರಕಾರ ಏಕಗವಾಕ್ಷಿ ಪದ್ಧತಿ ಮೂಲಕ ಅತ್ಯಗತ್ಯವಾದ ಸಹಾಯ ಕೊಡುವ ಕಾರ್ಯಕ್ರಮವನ್ನು ಆಗಲೇ ಜಾರಿಗೆ ತಂದಿದೆ. ಹೀಗಾಗಿ ಹೊಸ ಬಂಡವಾಳ ಹೂಡಿಕೆದಾರರು ವಿಳಂಬವಿಲ್ಲದೇ ಸರಕಾರದ ನೆರವು ಪಡೆಯಬಹುದಾಗಿದೆ ಎಂದೂ ಅವರು ತಿಳಿಸಿದರು.

ಚಿಕ್ಕಮಗಳೂರಿನ ಮಲ್ಯಮಾರುತ, ಹಂಪಿಯ ದರೋಜಿ ಕರಡಿಧಾಮ ಹಾಗೂ ಜೋಗದ ತಲಕಳಲೆಗಳಲ್ಲಿ 'ಆರಣ್ಯ ವಸತಿಗೃಹ' ಅಲ್ಲದೇ 'ವಿಹಾರ ಧಾಮ'ಗಳನ್ನು ನಿರ್ಮಿಸುವುದಾಗಿ ಪ್ರಕಟಿಸಿದ ಸಚಿವರು ಬನ್ನೇರು ಘಟ್ಟ ರಾಷ್ಟ್ರೀಯ ಉದ್ಯಾನದಲ್ಲಿ ವನ್ಯ ಪ್ರಾಣಿಗಳ ರಾತ್ರಿ ಸಫಾರಿ ಕೂಡ ಪ್ರಾರಂಭಿಸಲಾಗುವುದು ಎಂದು ನುಡಿದರು. ಪ್ರವಾಸೋದ್ಯಮ ಇಲಾಖೆ ನಿರ್ದೇಶಕ ವಿಶ್ವನಾಥ ರೆಡ್ಡಿ, ಕರ್ನಾಟಕ ಜಂಗಲ್ ಲಾಡ್ಜಸ್ ಮತ್ತು ರೆಸಾರ್ಟ್ಸ್‌ನ ವ್ಯವಸ್ಥಾಪಕ ನಿರ್ದೇಶಕ ಎಸ್.ವಿ. ತಿವಾರಿ, ಕೆ.ಎಸ್.ಟಿ.ಡಿ.ಸಿ ವ್ಯವಸ್ಥಾಪಕ ನಿರ್ದೇಶಕ ವಿನಯ್ ಲೂತ್ರ ಸಚಿವರ ಜತೆಗಿದ್ದರು.

[illegible] ಪಾರ್ಕ್: ಸೆ.೪ರಂದು ಇಲ್ಲಿನ ಮಹಾರಾಜ ವುಡ್‌ಲ್ಯಾಂಡ್ಸ್ ಹೋಟೇಲಿನಲ್ಲಿ ಇತ್ತೀಚೆಗೆ ಬೆಂಗಳೂರಿನಲ್ಲಿ ನಿಧನರಾದ ಪರೋಪಕಾರಿ, ಶಿಕ್ಷಣ ತಜ್ಞ, ಶೇಷಾದ್ರಿಪುರಮ್ ಶಿಕ್ಷಣ ದತ್ತಿ ಸಂಸ್ಥೆಯ ರೂವಾರಿ ಕೆ.ಎಂ. ನಂಜಪ್ಪ (98ವರ್ಷ)ನವರಿಗೆ ನುಡಿನಮನ ಸಲ್ಲಿಸುವ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು.

ಸಮಾರಂಭದ ಅಧ್ಯಕ್ಷತೆಯನ್ನು ಕರ್ನಾಟಕ ರಾಜಕೀಯ ಧುರೀಣ ಸನ್ಮಾನ್ಯ ಪಿ.ಜಿ.ಆರ್. ಸಿಂಧ್ಯಾ ವಹಿಸಿದ್ದರು. ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ "ನಂಜಪ್ಪನವರನ್ನು ಒಬ್ಬ ವ್ಯಕ್ತಿ ಎನ್ನುವುದಕ್ಕಿಂತಲೂ ಅಗಾಧ ಶಕ್ತಿಯೆಂದು ಬಗೆದು ಬಣ್ಣಿಸುವುದೇ ಹೆಚ್ಚು ಸೂಕ್ತ. ಎಳವೆಯಲ್ಲಿ ತಂದೆಯನ್ನು ಕಳೆದುಕೊಂಡು ಸಂಸಾರದ ಜವಾಬ್ದಾರಿಯನ್ನು ಹೆಗಲಿಗೇರಿಸಿಕೊಂಡು ಪರಿಶ್ರಮದಿಂದ ಬೆಳೆದರು. ಸಂಸಾರದ ಜೊತೆ ಜೊತೆಗೆ



ನಂಜಪ್ಪನವರಿಗೆ ಸಮಾಜವನ್ನೂ ಶ್ರೀಮಂತವಾಗಿ ಬೆಳೆಸುವ ಬಯಕೆ. ಅದಕ್ಕೋಸ್ಕರವೇ ಅವರು ಶಿಕ್ಷಣ ಸಂಸ್ಥೆಗಳನ್ನೂ ಕಟ್ಟಿ ಬೆಳೆಸಿ ಸಮಾಜಕ್ಕೆ ಧಾರೆ ಎರೆದ ಮಹಾನ್ ಉದಾರಿ. ಪ್ರತಿಯೊಂದು ನಗರಗಳಲ್ಲಿ ನಂಜಪ್ಪನವರಂಥ ಓರ್ವ ವ್ಯಕ್ತಿಯಿದ್ದರೂ ಸಾಕು ಎಷ್ಟೋ ದೀನರ ಬದುಕು ಬೆಳಗುತ್ತದೆ. ಸಮಾಜದ ಅಭಿವೃದ್ಧಿಯಾಗುತ್ತದೆ" ಎಂದು ಅವರು ನುಡಿದರು.

"ನಂಜಪ್ಪನವರು ಕಾಯಕ ದಾಸೋಹದಲ್ಲಿ ನಂಬಿಕೆ ಇಟ್ಟವರು. ಶಿಸ್ತಿನ ವ್ಯಕ್ತಿ. ವಿದ್ಯಾಭಿಮಾನಿ. ಆರ್.ವಿ. ಎಂಜಿನಿಯರಿಂಗ್ ಕಾಲೇಜಿನ ಸ್ಥಾಪಕ. ಈ ಸಂಸ್ಥೆಯ ಸ್ಥಾಪನೆಯ ಪ್ರಾರಂಭದ ಹಂತದಲ್ಲಿ ಹಣದ ಕೊರತೆ ಕಂಡು ಬಂದಾಗ ತನ್ನ ಮನೆಯನ್ನೇ ಬ್ಯಾಂಕಿಗೆ ಒತ್ತೆ ಇಟ್ಟು ಹಣ ಹೊಂದಿಸಿದ್ದು ಅವರ ಆಪ್ತರಿಗೆ ಮಾತ್ರ ತಿಳಿದ ವಿಷಯ. ಸ್ಕೌಟ್ಸ್ ಮತ್ತು ರೆಡ್‌ಕ್ರಾಸ್ ಸಂಸ್ಥೆಗಳಿಗೆ ಅವರು ನೀಡಿದ ಕೊಡುಗೆ ಅಪಾರ. ಸಮಾಜದ ಹಿತ ಬಯಸುವ ಸಂಸ್ಥೆಗಳಲ್ಲಿ ದುಡಿಯುವುದೆಂದರೆ ಅವರಿಗೆ ಅಪ್ಯಾಯಮಾನ" ಎಂದು ಮುಖ್ಯ ಅತಿಥಿಯಾಗಿದ್ದ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ಶಾಖೆಯ ಅಧ್ಯಕ್ಷರಾದ ಶ್ರೀ ಪೂವೇ ಕೃಷ್ಣ ಅವರು ಹೇಳಿದರು. ಇದೇ ಸಂದರ್ಭದಲ್ಲಿ ಕೃಷ್ಣ ಅವರನ್ನು ಸನ್ಮಾನಿಸಲಾಯಿತು.

ಮತ್ತೋರ್ವ ಮುಖ್ಯ ಅತಿಥಿ, ಶಾಸಕ ಬಿ. ಹೇಮಚಂದ್ರಸಾಗರ್ ಮಾತನಾಡಿ "ದಿ|ನಂಜಪ್ಪನವರ ಗುರಿ ಆರೋಗ್ಯಪೂರ್ಣ ಸಮಾಜ ಕಟ್ಟುವುದಾಗಿತ್ತು. ಅವರ ಕಾರ್ಯವ್ಯಾಪ್ತಿಯಲ್ಲಿ ಅದನ್ನು ಅವರು ಸಾಧಿಸಿದ್ದಾರೆ" ಎಂದರು.

ಉದ್ಯಮಿ ಚಂದ್ರಶೇಖರ ರಾಜು ಅವರು ಮಾತನಾಡಿ ಈ ಕಾರ್ಯಕ್ರಮ ಹೆಚ್ಚಿನವರಿಗೆ ಪ್ರೇರಣೆ ನೀಡಿ ಅವರೆಲ್ಲಾ ಆದರ್ಶದ ದಾರಿಯಲ್ಲಿ ನಡೆಯುವಂತಾಗಲಿ ಎಂದರು.

ಶ್ರೀಮತಿ ಸತ್ಯವಿಶ್ವನಾಥ ಸ್ವಾಗತ ಭಾಷಣ ಮಾಡಿದರು. ವೇದಿಕೆಯಲ್ಲಿ ಡಾ.ಬನಾದ್ ವಿಶ್ವನಾಥ್, ಗುರುಪ್ರಸಾದ್ ದೇವನಹಳ್ಳಿ ಮತ್ತು ಕಿರಣ್ ಕುಮಾರ್ ಮುಂತಾದವರು ಉಪಸ್ಥಿತರಿದ್ದರು.

ವಾಷಿಂಗ್‌ಟನ್ ಡಿ.ಸಿ.: ರಾಕ್‌ವೆಲ್‌ನಲ್ಲಿ ವಿಜ್ಞಾನಿ ಡಾ.ಜಗನ್ನಾಥ್ ಬನಾದ್ ಅವರ ಮನೆಯಲ್ಲಿ ದಿ|ಕೆ.ಎಂ ನಂಜಪ್ಪ ಅವರ ಸಂಸ್ಮರಣಾ ಸಭೆಯನ್ನು ದಿನಾಂಕ ೫-೯-೨೦೦೮ರಂದು ಏರ್ಪಡಿಸಲಾಗಿತ್ತು.

ವಿಶೇಷ ಆಹ್ವಾನಿತರಾಗಿದ್ದ ಪ್ರಜಾವಾಣಿ ಪತ್ರಿಕೆಯ ಸುದ್ದಿ ಸಂಪಾದಕ ಶ್ರೀ ಇ.ವಿ. ಸತ್ಯನಾರಾಯಣ ಅವರು ಮಾತನಾಡಿ ಬೆಂಗಳೂರಿನಲ್ಲಿ ನಂಜಪ್ಪನವರ ಹೆಸರು ಚಿರಸ್ಥಾಯಿಯಾಗಿ ಉಳಿಯುವಂತಹ ಹಲವು ವಿದ್ಯಾಸಂಸ್ಥೆಗಳನ್ನು ಬೆಳೆಸಿದ್ದಾರೆ. ಅದರ ಪ್ರತಿಫಲದಂತೆ ಇಂದು ನಾವು ಅವರನ್ನು ವಿದೇಶಿ ನೆಲದಲ್ಲಿ ಸ್ಮರಿಸುವ ಅವಕಾಶ ಒದಗಿ ಬಂದಿದೆ ಎಂದರು.

ಸಭೆಯನ್ನುದ್ದೇಶಿಸಿ ಶ್ರೀ ಪೂವೇಕೃಷ್ಣ, ಹೃದಯವಾಹಿನಿ ಸಂಪಾದಕ ಇಂ.ಕೆ.ಪಿ. ಮಂಜುನಾಥಸಾಗರ್ ಮತ್ತು ಕಿರುತೆರೆ ನಿರ್ದೇಶಕ ಶ್ರೀ ಶಿವಾನಂದ್ ಸೋಮಪ್ಪ ಮಾತನಾಡಿದರು. ಡಾ.ಜಗನ್ನಾಥ್ ಬನಾದ್ ಸ್ವಾಗತ ಭಾಷಣ ಮಾಡಿದರು.

ಸಭೆಯಲ್ಲಿ ಶ್ರೀಕಾವೇರಿ ಕೃಷ್ಣ ಮೂರ್ತಿ, ಶ್ರೀರಾಜಶೇಖರ್, ನ್ಯೂಯಾರ್ಕ್ ಕನ್ನಡ ಸಂಘದ ಅಧ್ಯಕ್ಷ ಶ್ರೀ ಶಿವ ಭಟ್ ಮತ್ತು ಶ್ರೀಮತಿ ಗಾಯತ್ರಿ ಜಗನ್ನಾಥ್ ಉಪಸ್ಥಿತರಿದ್ದರು.

(೬ನೇ ಪುಟದಿಂದ)



Editor & Publisher : K.P. Manjunath, Manjunath Associates, Raghu Building, Urwa Store, Mangalore - 575 006. Printed at : Diganths Mudhrana, Yeyyadi, Mangalore.

ಸಂಯುಕ್ತ ಕರ್ನಾಟಕ, ಬೆಂಗಳೂರು 19-9-2008




*ಬೆಂಗಳೂರು ಮಾಗಡಿ ರಸ್ತೆಯ ಶೇಷಾದ್ರಿಪುರಂ ವಾಣಿಜ್ಯ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ಸಾಂಸ್ಕೃತಿಕ ಕಾರ್ಯಕ್ರಮದ ಉದ್ಘಾಟನಾ ಸಮಾರಂಭದಲ್ಲಿ ವೂಡೇ ಪಿ. ಕೃಷ್ಣ, ಪ್ರೊ: ಬರಗೂರು ರಾಮಚಂದ್ರಪ್ಪ, ಪಂಡಿತಾರಾಧ್ಯ, ಸರೋಜಾ ನಂಜಪ್ಪ, ಜಯಶ್ರೀ ಜೆ. ಸಿಂಗ್ ಮತ್ತಿತರರು ಉಪಸ್ಥಿತರಿದ್ದರು.*

# ಅಕ್ಷರ ಅಂತಃಕರಣವಾಗಲಿ: ಬರಗೂರು

ಬೆಂಗಳೂರು, ಸೆ. 18– ಅಕ್ಷರ ಎಂಬುದು ಅಹಂಕಾರವಾಗದೆ ಅಂತಃಕರಣವಾಗಬೇಕು ಎಂದು ಸಾಹಿತಿ ಪ್ರೊ. ಬರಗೂರು ರಾಮಚಂದ್ರಪ್ಪ ಅಭಿಪ್ರಾಯಪಟ್ಟರು.

ನಗರದ ಮಾಗಡಿ ರಸ್ತೆಯಲ್ಲಿನ ಶೇಷಾದ್ರಿಪುರಂ ವಾಣಿಜ್ಯ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ಸಾಂಸ್ಕೃತಿಕ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದ ಅವರು, ಅವಿದ್ಯಾವಂತರೆಲ್ಲ ಅವಿವೇಕಿಗಳಲ್ಲ, ಹಾಗೆಯೇ ವಿದ್ಯಾವಂತರೆಲ್ಲ ವಿವೇಕಿಗಳಲ್ಲ. ನಾವಿಂದು ಅವಿದ್ಯಾವಂತರಲ್ಲಿ ವಿವೇಕವನ್ನು, ವಿದ್ಯಾವಂತರಲ್ಲಿ ಅವಿವೇಕಿತನವನ್ನು ಕಾಣುತ್ತಿದ್ದೇವೆ ಎಂದು ವಿಷಾದಿಸಿದರು.

ಒಂದು ರೀತಿ ಮಾನಸಿಕ ಮಲೀನತೆ ನಮ್ಮನ್ನು ಆವರಿಸಿಕೊಳ್ಳುತ್ತಿದೆ. ಇವೆಲ್ಲವನ್ನು ತೊಡೆದುಹಾಕಿ ಮಾನವೀಯತೆಯನ್ನು ನೀಡುವಂತಹದ್ದೇ ಸಾಂಸ್ಕೃತಿಕ ನೆಲೆ. ಹಾಗಾಗಿ ಅಕ್ಷರ ಅಹಂಕಾರವಾಗದೆ ಅಂತಃಕರಣವಾಗಬೇಕು ಎಂದು ಅವರು ಕರೆ ನೀಡಿದರು.

ವಾಣಿಜ್ಯ ವಿಷಯ ನಿಮ್ಮ ಮೆದುಳಿಗೆ ಬೇಕಾದ್ದನ್ನು ಕೊಟ್ಟರೆ, ನಿಮ್ಮ ಮನಸ್ಸಿಗೆ ಬೇಕಾದ್ದನ್ನು ಸಾಂಸ್ಕೃತಿಕ ಕಾರ್ಯಕ್ರಮ ನೀಡುತ್ತದೆ ಎಂದ ಅವರು, ವೃತ್ತಿ ಶಿಕ್ಷಣವೇ ಅಂತಿಮ ಶಿಕ್ಷಣವಲ್ಲ, ಇದು ಯಾವಾಗಲೂ ಜ್ಞಾನವನ್ನು ಕಲಿಸುವಂತಹದ್ದು ಎಂದು ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳಿದರು.

ನಮ್ಮ ದೇಶದಲ್ಲಿ ಶೆ. 6.9ರಷ್ಟು ಮಂದಿ ಮಾತ್ರವೇ ಉನ್ನತ ಶಿಕ್ಷಣ ಪಡೆಯುತ್ತಿದ್ದಾರೆ. ಇನ್ನೂ 10 ಕೋಟಿ ಮಕ್ಕಳು ಇದುವರೆಗೆ ಶಾಲೆಗಳಿಗೆ ಪ್ರವೇಶವನ್ನೇ ಪಡೆಯಲಾಗಿಲ್ಲ ಎಂದು ವಿಷಾದಿಸಿದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷ ಪಂಡಿತಾರಾಧ್ಯ ಮಾತನಾಡಿ, ನಮ್ಮನ್ನು ನಾವು ಗೌರವಿಸಬೇಕು. ಹಾಗೆಯೇ ನಮ್ಮ ಮಾತೃಭಾಷೆಯನ್ನು ಗೌರವಿಸಿ, ಅಕ್ಷರ ತಿಳಿಯದವರಿಗೆ ಅಕ್ಷರವನ್ನು ಕಲಿಸುವ ಪ್ರಯತ್ನ ಮಾಡಬೇಕು ಎಂದರು.

ದತ್ತಿಯ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಉಪ ಕಾರ್ಯದರ್ಶಿ ಸರೋಜಾ ನಂಜಪ್ಪ, ಆಡಳಿತ ಮಂಡಳಿ ಅಧ್ಯಕ್ಷ ಎಸ್. ಶೇಷನಾರಾಯಣ, ಸದಸ್ಯರಾಸದ ಶ್ರೀನಿವಾಸಲು, ಪ್ರಾಂಶುಪಾಲರಾದ ಜಯಶ್ರೀ ಜೆ. ಸಿಂಗ್ ಮತ್ತಿತರರು ಉಪಸ್ಥಿತರಿದ್ದರು.

# ಜೀವಕ್ಕೆ ಜೀವ [illegible]





**ಭಾರತೀಯ ರೆಡ್ ಕ್ರಾಸ್ ಸಂಸ್ಥೆಯು ಒಂದು ಪ್ರತಿಷ್ಟಿತವಾದ ಸಾಮಾಜಿಕ ಸೇವಾ ಸಂಸ್ಥೆಯಾಗಿದ್ದು ಯುದ್ಧ ಮತ್ತು ಶಾಂತಿಯ ಸಂದರ್ಭಗಳಲ್ಲಿ ಮಾನವೀಯ ಮೌಲ್ಯಗಳೊಂದಿಗೆ ಸಮಾಜ ಸೇವಾ ಚಟುವಟಿಕೆಗಳನ್ನು ಮಾಡುವಂತಹ ಸಂಸ್ಥೆಯಾಗಿರುತ್ತದೆ. ಕ್ರಿ.ಶ. 1863 ರಲ್ಲಿ ಉಗಮವಾದ ಭಾರತೀಯ ರೆಡ್ ಕ್ರಾಸ್ ಸಂಸ್ಥೆಯು ಒಂದು ಐತಿಹಾಸಿಕ ಸಂಸ್ಥೆಯಾಗಿದೆ. ಸ್ವಿಜರ್‌ಲ್ಯಾಂಡ್ ದೇಶಕ್ಕೆ ಸೇರಿದ ಜೀನ್ ಹೆನ್ರಿ ಡ್ಯಾನ್ಯಾಂಟ್ ಈ ಸಂಸ್ಥೆಯ ಸಂಸ್ಥಾಪಕರು. ರೆಡ್ ಕ್ರಾಸ್ ಸಂಸ್ಥೆಯ ಸ್ಥಾಪಕರಾದ ಸರ್ ಜೀನ್ ಹೆನ್ರಿ ಡೂವಾಯ್‌ರವರ ಜನ್ಮ ದಿನವನ್ನು ಮೇ 8 ನೇ ತಾರೀಖಿನಂದು ವಿಶ್ವಾದ್ಯಂತ ರೆಡ್ ಕ್ರಾಸ್ ದಿನಾಚಾರಣೆಯನ್ನು ಆಚರಿಸಲಾಗುತ್ತಿದೆ.**

ಭಾರತೀಯ ಸಂಸತ್ತು ಸಂವಿಧಾನದ ಚೌಕಟ್ಟಿನಲ್ಲಿ ಅಂಗೀಕರಿಸಿದ ಕಾಯ್ದೆ XV 1920 ರಂತೆ, 1920 ರಲ್ಲಿ ಭಾರತೀಯ ರೆಡ್ ಕ್ರಾಸ್ ಸಂಸ್ಥೆಯು ಅಸ್ತಿತ್ವಕ್ಕೆ ಬಂದಿತು ಮತ್ತು ಭಾರತೀಯ ರೆಡ್ ಕ್ರಾಸ್ ಕರ್ನಾಟಕ ರಾಜ್ಯ ಶಾಖೆಯು 1921 ರಲ್ಲಿ ಕಾರ್ಯಾರಂಭವಾಯಿತು.



ರೆಡ್ ಕ್ರಾಸ್ ಸಂಸ್ಥೆಯು ಸದಾ ಬದಲಾಗುತ್ತಿರುವ ಹವಾಗುಣದೊಂದಿಗೆ ಕಾರ್ಯ ಪ್ರವೃತ್ತರಾಗುವುದು 2008 ರ ಘೋಷಣೆಯಾಗಿರುತ್ತದೆ. ಯುದ್ಧದಲ್ಲಿ ಗಾಯಗೊಂಡ ಸೈನಿಕರನ್ನು ಸರಿಯಾದ ಸಮಯದಲ್ಲಿ ಸೂಕ್ತ ಚಿಕಿತ್ಸೆಯೊಂದಿಗೆ ಆಧರಿಸುವ ಪ್ರಧಾನ ಉದ್ದೇಶದೊಂದಿಗೆ ಸ್ಥಾಪಿತವಾದ ರೆಡ್ ಕ್ರಾಸ್ ಸಂಸ್ಥೆಯು ಶಾಂತಿ ಕಾಲದಲ್ಲಿ ಅವಶ್ಯವಿರುವ ರಕ್ತ ಪೂರೈಕೆಯಂತಹ ಚಟುವಟಿಕೆಗಳನ್ನು ಮತ್ತು ಪ್ರಕೃತಿ ವಿಕೋಪದಂತಹ ಸಂದರ್ಭಗಳಲ್ಲಿ ಸಂಭವಿಸುವ ಪ್ರವಾಹ ಹಾಗೂ ಇತರೆ ನೈಸರ್ಗಿಕ ಕ್ಷೋಭೆಗಳ ಸಮಯದಲ್ಲಿ ಕಾರ್ಯ ಪ್ರವೃತ್ತತೆ, ಆರೋಗ್ಯ ತಪಾಸಣೆ, ಬ್ಲಡ್ ಡೊನೇಷನ್ ಕ್ಯಾಂಪ್‌ನಂತಹ ಸೇವಾ ಚಟುವಟಿಕೆಗಳು ಮತ್ತು ಜೂನಿಯರ್/ಯೂತ್ ರೆಡ್ ಕ್ರಾಸ್‌ನಂತಹ ಚಟುವಟಿಕೆಗಳಿಗಾಗಿ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗುತ್ತಿದೆ.









ಪ್ರಾಪಂಚಿಕ ಹವಾಮಾನದಲ್ಲಿ ನಿರಂತರವಾಗಿ ಹಲವು ಬದಲಾವಣೆಗಳು ಸಂಭವಿಸಿದಾಗ ಆರೋಗ್ಯ ಸಂಬಂಧಿತ ಅಪಾಯದ ಸಾಧ್ಯತೆ ನೈಸರ್ಗಿಕವಾಗಿ ಕಂಡುಬರುತ್ತಿದೆ. ಅಪಾಯದ ವ್ಯಾಪ್ತಿಯು ಭೌತಿಕವಾಗಿ, ಸಾಂಕ್ರಾಮಿಕ ರೋಗ ರುಜಿನಗಳಿಗೆ ರಹದಾರಿಯಾಗುವುದರೊಂದಿಗೆ ಅಪಾಯದ ದುಷ್ಪರಿಣಾಮಗಳಿಗೆ, ಹವಾಮಾನ ಬದಲಾವಣೆಯು ಪ್ರಮುಖ ಕಾರಣವಾಗಿದೆ. ಬಹಳ ಸಂಖ್ಯೆಯಲ್ಲಿ ಜನಸಾಮಾನ್ಯರು ಹೆಚ್ಚಿನ ಶಾಖಮಾನದಿಂದಾಗಿ ಮರಣ ಹೊಂದುತ್ತಿದ್ದಾರೆ. ಹಾಗೆಯೇ ಮೂಲಭೂತವಾಗಿ ಕಂಡು ಬರುವ ರೋಗಗಳಿಗೆ ತುತ್ತಾಗುತ್ತಿದ್ದರೆ ಮತ್ತು ನೈಸರ್ಗಿಕ ವಿಪತ್ತುಗಳ ಪಾತ್ರವೂ ದೊಡ್ಡ ಪ್ರಮಾಣದ್ದೆ ಆಗಿದೆ.

ಹವಾಮಾನ ಬದಲಾವಣೆಯಿಂದ ಉಂಟಾಗುವ ಈ ಬಗೆಯ ದುಷ್ಪರಿಣಾಮಗಳಿಗೆ ವ್ಯತಿರಿಕ್ತತೆ ಉಂಟಾಗಲು ಕೆಲವು ವರ್ಷಗಳು ಇಲ್ಲವೇ ದಶಕಗಳು ಬೇಕಾಗುತ್ತವೆ. ಆದಾಗ್ಯೂ ಈ ರೀತಿಯ ದುಷ್ಪರಿಣಾಮಗಳನ್ನು ನಿಯಂತ್ರಿಸಲು ಕೆಲವು ಸಾಧ್ಯತೆಗಳು ಇವೆ. ಸಾರ್ವಜನಿಕರಲ್ಲಿ ಹವಾಮಾನದ ಬದಲಾವಣೆಯಿಂದಾಗುವ ಪರಿಣಾಮಗಳ ಕುರಿತು ಜಾಗೃತೆ ವಹಿಸಬೇಕಾದುದು ಅವಶ್ಯಕವಾಗಿದೆ. ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿಯೂ ಹವಾಮಾನ ವೈಪರೀತ್ಯದಿಂದಾಗುವ ಪರಿಣಾಮಗಳ ಕುರಿತು ಅರಿವು ಮತ್ತು ಪ್ರಾದೇಶಿಕ ಮಟ್ಟದಲ್ಲಿಯೂ ಒಪ್ಪಂದಗಳು ಆಗಬೇಕಾದ ಅವಶ್ಯಕತೆಯಿದೆ. ಇದು ಜಾಗತಿಕ ಆರೋಗ್ಯ ಸುಧಾರಣೆಗೆ ಸಹಾಯವಾಗುತ್ತದೆ ಹಾಗೂ ಸಮುದಾಯ ಆರೋಗ್ಯ ಸುಧಾರಣೆಗಳಿಗಾಗಿ ಅನೇಕ ಯೋಜಿತ ಕಾರ್ಯಕ್ರಮಗಳನ್ನು ವ್ಯವಸ್ಥಿತವಾಗಿ ರೂಪಿಸುವಲ್ಲಿ ಸರ್ಕಾರಗಳ ಪಾತ್ರವೂ ಪ್ರಮುಖವಾಗಿದ್ದು, ಅದರೊಂದಿಗೆ ಪ್ರಾದೇಶಿಕ ಸಂಘ ಸಂಸ್ಥೆಗಳ ಸಹಯೋಗವು ಹವಾಮಾನ ವೈಪರೀತ್ಯಗಳಿಂದಾಗುವ ಹಾನಿಯನ್ನು ಕುಂಠಿತ ಗೊಳಿಸಲು ಸಹಕಾರಿಯಾಗುತ್ತದೆ.

ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಮಹತ್ತರವಾದ ಆರೋಗ್ಯ ಸೇವೆಗಳು ಹಾಗೂ ವಿಶೇಷ ಕಾರ್ಯ ಚಟುವಟಿಕೆಗಳು ಅತ್ಯುನ್ನತ ಮಟ್ಟದ ಸ್ವಯಂ ಪ್ರೇರಿತ ರಕ್ತದಾನ ಶಿಬಿರಗಳು, ಅಂಗವಿಕಲರಿಗೆ ಪರಿಕರಗಳನ್ನು ವಿತರಿಸುವುದು. ವಿವಿಧ ಕಾಯಿಲೆಗಳಿಂದ ನರಳುತ್ತಿರುವ ಬಡವರಿಗೆ ನಿರ್ಗತಿಕರಿಗೆ ಧನ ಸಹಾಯ ಮಾಡುವುದು ಇಂತಹ ವಿಶಿಷ್ಟ ಸೇವೆಗಳನ್ನು ಮಾಡಿಕೊಂಡು ಬರುತ್ತಿದೆ. ಇಂದು ರಾಷ್ಟ್ರದಲ್ಲಿ ಅತ್ಯುನ್ನತ ಸ್ಥಾನವನ್ನು, ಹೆಸರನ್ನು ಗಳಿಸಿರುವ ಸಂಸ್ಥೆ ರೆಡ್ ಕ್ರಾಸ್ ಸಂಸ್ಥೆಯಾಗಿದೆ.

ಭಾರತೀಯ ರೆಡ್ ಕ್ರಾಸ್ ಸಂಸ್ಥೆ, ಕರ್ನಾಟಕ ರಾಜ್ಯ ಶಾಖೆ ಪ್ರತಿ ವರ್ಷವೂ ಉದ್ದೇಶಗಳನ್ನು ಜನತೆಗೆ ಮೂಡಿಸಲು ಯೂತ್ ರೆಡ್ ಕ್ರಾಸ್ ಡೇ, ವಿಶ್ವ ಆರೋಗ್ಯ ದಿನಾಚಾರಣೆ, ವಿಶ್ವ ರೆಡ್ ಕ್ರಾಸ್ ದಿನಾಚಾರಣೆ, ವಿಶ್ವ ರಕ್ತದಾನಿಗಳ ದಿನಾಚಾರಣೆ, ವಿಶ್ವ ಏಡ್ಸ್ ದಿನಾಚಾರಣೆ ಇಂತಹ ಹಲವಾರು ಸಾಮಾಜಿಕ ಚಿಂತನೆಯ ಕಾರ್ಯಕ್ರಮಗಳನ್ನು ಜನ ಜಾಗೃತಿ ಜಾಥಾಗಳನ್ನು ಏರ್ಪಡಿಸಿ ಸಮಾಜ ಸೇವಾ ಕಾರ್ಯಗಳಲ್ಲಿ ಸದಾ ರೆಡ್ ಕ್ರಾಸ್ ಸಂಸ್ಥೆಯು ಭಾಗಿಯಾಗಿದೆ.

– ಎಂ. ನಾಗರಾಜ



## ಬೆಂಗಳೂರು ಇತಿಹಾಸ ಮಾಲೆ

ಸುರೇಶ್ ಮೂನ sureshmoona@gmail.com

# ವೈವಿಧ್ಯಮಯ ಸೇವಾ ಕ್ಷೇತ್ರಗಳು

ಶೇಷಾದ್ರಿಪುರಂ ಶಿಕ್ಷಣ ದತ್ತಿ ತನ್ನ ಸಮಾಜ ಸೇವೆಯನ್ನು ಶಿಕ್ಷಣ ಕ್ಷೇತ್ರದಲ್ಲಷ್ಟೇ ಅಲ್ಲದೆ ವೈವಿಧ್ಯಮಯವಾದ ಕ್ರಿಯಾತ್ಮಕ ಚಟುವಟಿಕೆಗಳಿಗೂ ಹಲವಾರು ದಶಕಗಳ ಹಿಂದಿನಿಂದಲೇ ವಿಸ್ತರಿಸಿಕೊಂಡಿದೆ. ಇಂಡಿಯನ್ ರೆಡ್‌ಕ್ರಾಸ್ ಸೇವಾ ಸಂಸ್ಥೆಗೂ ಶೇಷಾದ್ರಿಪುರಂ ಪ್ರೌಢ ಶಾಲೆಗೂ ಹಳೆಯ ನಂಟುಂಟು. ಶಾಲಾ ಮಕ್ಕಳಲ್ಲಿ ಸೇವಾ ಮನೋಭಾವನೆಯ ಹಿರಿಮೆಯ ಬಗ್ಗೆ ಅರಿವು ಮೂಡಿಸಲು 1950ರ ದಶಕದಿಂದಲೇ ರೆಡ್‌ಕ್ರಾಸ್ ಇಲ್ಲಿ ಪರೀಕ್ಷೆಗಳನ್ನು ನಡೆಸುತ್ತಿತ್ತು. ಪ್ರೌಢ ಶಾಲೆಯಲ್ಲಿ ಜೂನಿಯರ್ ರೆಡ್‌ಕ್ರಾಸ್ ಹಾಗು ಕಾಲೇಜಿನಲ್ಲಿ ಯುವ ರೆಡ್‌ಕ್ರಾಸ್ ಘಟಕಗಳಿದ್ದು ಇಲ್ಲಿನ ವಿದ್ಯಾರ್ಥಿಗಳು ಸಮಾಜಕ್ಕೆ ಉಪಯೋಗಕರವಾದ ಚಟುವಟಿಕೆಗಳಲ್ಲಿ ತೊಡಗುತ್ತಾರೆ. ರಕ್ತದಾನ ಶಿಬಿರ, ರಕ್ತದ ಗುಂಪುಗಳ ಪರೀಕ್ಷೆ ಮುಂತಾದ ಕಾರ್ಯಕ್ರಮಗಳನ್ನು ಈ ಘಟಕಗಳು ಹಮ್ಮಿಕೊಂಡಿವೆ. ಸುನಾಮಿ ಸಂತ್ರಸ್ತರಿಗಾಗಿ ಇದು ಸುಮಾರು 8 ಲಕ್ಷ ರೂಗಳ ಪರಿಹಾರ ಧನವನ್ನು ಸಂಗ್ರಹಿಸಿ ಸುನಾಮಿಯಿಂದ ಹಾನಿಗೊಳಗಾದ ಪ್ರದೇಶಗಳಲ್ಲಿ ಶಾಲಾ ಕಟ್ಟಡಗಳನ್ನು ನಿರ್ಮಿಸಲು ಬಳಸಲಾಗಿದೆ.

ಶೇಷಾದ್ರಿಪುರಂ ಪ್ರೌಢಶಾಲೆಯ ಮತ್ತೊಂದು ಹೆಗ್ಗಳಿಕೆಯೆಂದರೆ ನಮ್ಮ ದೇಶದ ಪ್ರಮುಖ ಹಾಗು ಪ್ರಸಿದ್ಧ ಸೇವಾ ಸಂಸ್ಥೆಯಾದ ಭಾರತ ಸೇವಾದಳದ ಸರ್ವೋದಯ ಶಾಖೆಯನ್ನು 1952ರ ಸ್ವಾತಂತ್ರ್ಯೋತ್ಸವದಂದು ಇಲ್ಲಿ ಪ್ರಾರಂಭಿಸಲಾಯಿತು. ಇದನ್ನು ಪ್ರಾರಂಭಿಸಲು ಕಾರಣಕರ್ತರಾದ ಕ.ಶ್ರೀ.ನಾರಾಯಣ ಮೂರ್ತಿ ಅವರ ಗುರು ಐ.ಎಸ್.ಎ. ರಾಮರಾಯರೇ ಈ ಶಾಖೆಯನ್ನು ಉದ್ಘಾಟಿಸಿದರು. ಆಗಿನ ಮಾಜಿ ಮೇಯರ್ ಜಿ. ಲಿಂಗಯ್ಯ ಅವರ ಹತ್ತಿರದ ಸಂಬಂಧಿ ಎಚ್.ಕೆ.ಸುಬ್ಬಣ್ಣ ಸೇವಾದಲದ ಸಮವಸ್ತ್ರವನ್ನು ಧರಿಸಿ ಬಂದ ಪ್ರಥಮ ವಿದ್ಯಾರ್ಥಿಯಾದರು. ಇವರು ಮುಂದೆ ಕಾಂಗ್ರೆಸ್‌ನಲ್ಲೂ ಜವಾಬ್ದಾರಿಯುತವಾದ ಸ್ಥಾನವನ್ನು ಪಡೆದರು. ಈ ಶಾಖೆ ಪ್ರಾರಂಭವಾದ ಒಂದೆರಡು ವರ್ಷಗಳಲ್ಲೇ ಬೆಂಗಳೂರಿಗೆ ಆಗಮಿಸಿದ ಆಗಿನ ರಾಷ್ಟ್ರಪತಿ ಬಾಬೂ ರಾಜೇಂದ್ರ ಪ್ರಸಾದ್ ಅವರಿಗೆ ಸೆಂಟ್ರಲ್ ಕಾಲೇಜು ಮೈದಾನದಲ್ಲಿ ಗೌರವ ರಕ್ಷೆ ನೀಡಿ ಸ್ವಾಗತಿಸುವ ಅವಕಾಶವನ್ನು ಪಡೆದಿದ್ದರು. ನಾರಾಯಣ ಮೂರ್ತಿಯವರು ನಮ್ಮ ರಾಷ್ಟ್ರದ ಪ್ರಥಮ ಪ್ರಜೆಗೆ ಮಾಲಾರ್ಪಣೆ ಮಾಡಿದ್ದರು. ಹಾಗೆಯೇ 1964ರಲ್ಲಿ ಗಣರಾಜ್ಯೋತ್ಸವದ ಪೆರೇಡ್‌ನಲ್ಲಿ ಆಗಿನ ರಾಜ್ಯಪಾಲ ಜಯಚಾಮರಾಜೇಂದ್ರ ಒಡೆಯರಿಗೆ ಗೌರವರಕ್ಷೆಯನ್ನು ನೀಡುವ ಹೆಗ್ಗಳಿಕೆಯೂ ಈ ಶಾಖೆಯದ್ದಾಗಿತ್ತು. ಈ ಶಾಖೆಯ ಹಲವಾರು ಸೇವಾ ಕಾರ್ಯಗಳ ಬಗ್ಗೆ ತಿಳಿದಿದ್ದ ಕೇಂದ್ರ ರೈಲ್ವೆ ಇಲಾಖೆ 1970ರಲ್ಲಿ ಮಾಡಿದ ಕೋರಿಕೆಯ ಮೇರೆಗೆ ಬೆಂಗಳೂರು ರೈಲ್ವೆ ನಿಲ್ದಾಣದಲ್ಲಿ ಟಿಕೆಟ್ ಇಲ್ಲದೇ ಪ್ರಯಾಣ ಮಾಡುವವರನ್ನು ಹಿಡಿಯಲು ಶಾಖೆಯ ವಿದ್ಯಾರ್ಥಿಗಳು ನೆರವಾದರು. ಅದೇ ವರ್ಷ ಖ್ಯಾತ ನೇತ್ರ ತಜ್ಞ ಡಾ। ಎಂ.ಸಿ.ಮೋದಿಯವರು ಬೆಂಗಳೂರಿನಲ್ಲಿ ನಡೆಸಿದ ಉಚಿತ ನೇತ್ರ ಚಿಕಿತ್ಸಾ ಶಿಬಿರದಲ್ಲಿ ರೋಗಿಗಳಿಗೆ ಸಹಾಯ ಮಾಡಿದವರೂ ಈ ಶಾಖೆಯ ಸದಸ್ಯರೇ.

1971ರಲ್ಲಿ ಭಾರತ-ಪಾಕಿಸ್ತಾನ ಯುದ್ಧ ನಡೆಯುತ್ತಿದ್ದಾಗ ವಿಮಾನದಾಳಿಯಿಂದ ರಕ್ಷಿಸಿಕೊಳ್ಳುವ ಕ್ರಮದ ಬಗ್ಗೆ ಸಾರ್ವಜನಿಕರಿಗೆ ಅರಿವು ಉಂಟು ಮಾಡಲು ಬ್ಲಾಕ್‌ಔಟ್ ಎಂಬ ಕವಾಯತನ್ನು ಆಗ ಪ್ರಮುಖ ನಗರಗಳಲ್ಲಿ ಮಾಡಲಾಗುತ್ತಿತ್ತು. ಬೆಂಗಳೂರಿನಲ್ಲಿ ನಡೆದ ಅಂತಹ ಕಾರ್ಯಕ್ರಮಗಳಲ್ಲಿ ಈ ಶಾಖೆಯ ವಿದ್ಯಾರ್ಥಿಗಳು ಪೊಲೀಸರಿಗೆ ಸಹಾಯಹಸ್ತ ನೀಡಿದರು. 1981ರಲ್ಲಿ ಮುಖ್ಯಮಂತ್ರಿ ಗುಂಡೂರಾವ್ ಅವರ ಕರೆಯ ಮೇರೆಗೆ ಈ ಶಾಖೆಯ ಮಕ್ಕಳು ಆಗ ವ್ಯಾಪಕವಾಗಿ ಬೆಳೆದಿದ್ದ ಹಾಗೂ ಸಾರ್ವಜನಿಕರ ಆರೋಗ್ಯಕ್ಕೆ ಮಾರಕವಾಗಿದ್ದ ಪಾರ್ಥೇನಿಯಂ ಕಳೆಯನ್ನು ಕಿತ್ತೊಗೆಯುವ ಕಾರ್ಯದಲ್ಲೂ ಸಕ್ರಿಯವಾಗಿ ಭಾಗವಹಿಸಿದ್ದರು. ಇವಿಷ್ಟೇ ಅಲ್ಲದೆ ರಾಜ್ಯದ ವಿವಿಧ ಕಡೆಗಳಲ್ಲಿ ರಾಷ್ಟ್ರಧ್ವಜ ಮತ್ತು ರಾಷ್ಟ್ರಗೀತೆ ಬಗ್ಗೆ ತಿಳುವಳಿಕೆ ನೀಡುವ ಶಿಬಿರಗಳಲ್ಲಿ ಭಾಗವಹಿಸಿ ಹಲವಾರು ಮನೋರಂಜನೆಯ ಕಾರ್ಯಕ್ರಮಗಳನ್ನು ನೀಡುತ್ತಿದ್ದರು. ಹೀಗೆ ವಿಭಿನ್ನವಾದ ಸೇವಾಕಾರ್ಯಗಳಲ್ಲಿ ತೊಡಗಿದ ಈ ಶಾಖೆ 1986ರ ಡಿಸೆಂಬರ್ 20 ರಂದು 25 ವರ್ಷಗಳನ್ನು ಸಂಪೂರ್ಣಗೊಳಿಸಿದುದರ ನೆನಪಾಗಿ ಬೆಳ್ಳಿಹಬ್ಬವನ್ನು ಆಚರಿಸಿ ಹಾಗೆ ಮಾಡಿದ ರಾಜ್ಯದ ಮೊದಲ ಶಾಖೆ ಎಂಬ ಹೆಗ್ಗಳಿಕೆಗೂ ಪಾತ್ರವಾಯಿತು. ಆಗಿನ ಶಿಕ್ಷಣ ಸಚಿವರಾಗಿದ್ದ ಡಿ.ಮಂಜುನಾಥ್ ಕಾರ್ಯಕ್ರಮದಲ್ಲಿ ಭಾಗವಹಿಸಿ ಶಾಖೆಯ ಸಾಧನೆಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದ್ದರು. ಅಂದು ಸಂಜೆ ಬೆಂಗಳೂರು ಆಕಾಶವಾಣಿಯೂ ಸಹ ಈ ಕಾರ್ಯಕ್ರಮವನ್ನು ವರದಿ ಮಾಡಿತು. ಆನಂತರದ ದಶಕಗಳಲ್ಲಿ ಅವಶ್ಯಕತೆಗಳಿಗೆ ಅನುಗುಣವಾಗಿ ಪರಿಸರ ಜಾಗೃತಿ ಕಾರ್ಯಕ್ರಮವನ್ನು ಈ ಶಾಖೆ ಹಮ್ಮಿಕೊಂಡಿದೆ. ಪ್ರಸ್ತುತ ಸಚಿವರಾಗಿರುವ ರಾಮಚಂದ್ರೇಗೌಡರೂ ಸೇರಿದಂತೆ ನಮ್ಮ ನಾಡಿನ ಅನೇಕ ಗಣ್ಯ ವ್ಯಕ್ತಿಗಳು ಈ ಶಾಖೆಯ ಇಂತಹ ಸೇವಾ ಕಾರ್ಯಗಳಲ್ಲಿ ಭಾಗವಹಿಸಿ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡಿದ್ದಾರೆ. ಹೀಗೆ ಮುಂದುವರೆದ ಈ ಶಾಖೆ 2007ರ ಫೆಬ್ರವರಿ 2ರಂದು ಶಾಲಾ ಆವರಣದಲ್ಲಿ ಸುವರ್ಣ ಮಹೋತ್ಸವವನ್ನು ಆಚರಿಸಿತು. ಇದರಲ್ಲಿ ಭಾಗವಹಿಸಿದ್ದ ಸಚಿವ ರಾಮಚಂದ್ರೇಗೌಡರು ತಮ್ಮ ಶಾಲಾ ದಿನಗಳನ್ನು ಮೆಲುಕು ಹಾಕಿದರು. ಈ ಶಾಖೆಯ ವಿದ್ಯಾರ್ಥಿ ನಾಯಕರಾಗಿದ್ದವರೂ ರಾಜ್ಯಸಭಾ ಸದಸ್ಯರೂ, ಅಖಿಲ ಭಾರತ ಕಾಂಗ್ರೆಸ್ ಸಮಿತಿ ಸದಸ್ಯರೂ ಆಗಿದ್ದ ಬಿ.ಕೆ.ಹರಿಪ್ರಸಾದ್ 'ಸೇವೆಗಾಗಿ ಬಾಳು' ಎಂಬ ಸ್ಮರಣ ಸಂಚಿಕೆಯನ್ನು ಬಿಡುಗಡೆ ಮಾಡಿದರು. ಈ ದತ್ತಿಯ ಅಧ್ಯಕ್ಷರೂ, ಬೆಂಗಳೂರಿನ ಹೆಸರಾಂತ ಗಣ್ಯ ವ್ಯಕ್ತಿಗಳೂ ಆಗಿದ್ದ ಕೆ.ಎಂ.ನಂಜಪ್ಪ, ಸೇವಾದಳದ ಕೇಂದ್ರ ಸಮಿತಿ ಅಧ್ಯಕ್ಷ ಎಚ್.ಎಂ.ಗುರುಸಿದ್ದಸ್ವಾಮಿ ಹಾಗು ಅದರ ಕಾರ್ಯದರ್ಶಿ ಯು.ಆರ್. ಸಭಾಪತಿ ಮುಂತಾದವರು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಈ ಶಾಖೆಯ ಮತ್ತೊಂದು ವೈಶಿಷ್ಟ್ಯವೆಂದರೆ ಸೇವಾದಳದ ಕೇಂದ್ರ ಆಡಳಿತ ಮಂಡಳಿಯ ಪ್ರೊ.ಪಿ.ಕೃಷ್ಣರವರೇ ಈ ದತ್ತಿಯ ಪ್ರಧಾನ ಕಾರ್ಯದರ್ಶಿಯಾಗಿರುವುದು. ಇದರಿಂದಾಗಿ ಈ ಕೇಂದ್ರದ ಎಲ್ಲ ಸೇವಾ ಯೋಜನೆಗಳು ವಿಶೇಷವಾಗಿ ನಡೆಯುತ್ತವೆ.

■ ಮುಂದುವರೆಯುವುದು



ಸುವರ್ಣ ಮಹೋತ್ಸವದ ಉದ್ಘಾಟನೆ

ಪ್ರಜಾವಾಣಿ

ಮಂಗಳವಾರ
16ನೇ ಸೆಪ್ಟೆಂಬರ್ 2008



## ‘ರೆಡ್ ಕ್ರಾಸ್’

ಬಿಹಾರ ಸಂತ್ರಸ್ತರಿಗೆ ಪರಿಹಾರ ಸಾಮಗ್ರಿಗಳ ರವಾನೆಗೆ ರಾಜ್ಯ ರೆಡ್ ಕ್ರಾಸ್ ಉಪಾಧ್ಯಕ್ಷ ವೂಡೇ ಪಿ.ಕೃಷ್ಣ ಸೋಮವಾರ ಬೆಂಗಳೂರಿನಲ್ಲಿ ಚಾಲನೆ ನೀಡಿದರು.

ಸಂಯುಕ್ತ ಕರ್ನಾಟಕ, ಬೆಂಗಳೂರು 15-9-2008

# ಸ್ವಾತಂತ್ರ್ಯ ಸಂಗ್ರಾಮ ಜ್ಯೋತಿ ಆಗಮನ

ಬೆಂಗಳೂರು, ಸೆ. 14– 1857ರಲ್ಲಿ ನಡೆದ ಭಾರತದ ಪ್ರಥಮ ಸ್ವಾತಂತ್ರ್ಯ ಚಳವಳಿಯ 150 ವರ್ಷಗಳ ಸ್ಮರಣಾರ್ಥದ ಜ್ಯೋತಿಯು ಇಂದು ನಗರದ ಶೇಷಾದ್ರಿಪುರಂ ಪ್ರೌಢಶಾಲೆಗೆ ಆಗಮಿಸಿತು.

ವಂದೇಮಾತರಂ ಓಟದ ಉದ್ದೇಶವು ನಾಡಿನ ಜನರಲ್ಲಿ ಹಾಗೂ ಕಿರಿಯರಲ್ಲಿ ರಾಷ್ಟ್ರಪ್ರೇಮ, ರಾಷ್ಟ್ರ ನಿರ್ಮಾಣದಲ್ಲಿ ಆಸಕ್ತಿ ಹಾಗೂ ಉತ್ಸಾಹವನ್ನು ಪುನರುದ್ದೀಪನಗೊಳಿಸುವುದೆಂದು ಶೇಷಾದ್ರಿಪುರಂ ಶಿಕ್ಷಣಸಂಸ್ಥೆ ಗೌರವ ಕಾರ್ಯದರ್ಶಿ ಪ್ರೊ. ಪಿ. ಕೃಷ್ಣ ಈ ಸಂದರ್ಭದಲ್ಲಿ ಅಭಿಪ್ರಾಯಪಟ್ಟರು.

ಸ್ವಾತಂತ್ರ್ಯ ಹೋರಾಟದ ಮಹತ್ವವನ್ನು ಬಳ್ಳಾರಿಯ ಮಲ್ಲಸಜ್ಜನ ವ್ಯಾಯಾಮ ಶಾಲೆಯ ಕಾರ್ಯದರ್ಶಿ ಟಿ.ಜಿ. ವಿಠ್ಠಲ್ ವಿವರಿಸಿದರು.

ರಾಷ್ಟ್ರೀಯ ಭಾವೈಕ್ಯತೆ ಹಾಗೂ ಒಗ್ಗಟ್ಟಿನಿಂದ ಬಾಳುವುದರ ಮಹತ್ವವನ್ನು ಬಳ್ಳಾರಿ ಶಾಸಕ ಸೋಮಶೇಖರ ರೆಡ್ಡಿ ಈ ಸಂದರ್ಭದಲ್ಲಿ ಮಕ್ಕಳಿಗೆ ಕೂಲಂಕಷವಾಗಿ ತಿಳಿಸಿದರು.

ಗಾಂಧಿವಾದಿ ಸತ್ಯವ್ರತ, ಸ್ವಾತಂತ್ರ್ಯ ಹೋರಾಟಗಾರ ಎಸ್.ವಿ. ಮಂಜುನಾಥ್, ಶೇಷಾದ್ರಿಪುರಂ ಶಿಕ್ಷಣಸಂಸ್ಥೆ ಸಹ ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ, ಕೋಶಾಧ್ಯಕ್ಷ ಬಿ.ಎಂ. ಪಾರ್ಥಸಾರಥಿ, ಶಾಲಾಭಿವೃದ್ಧಿ ಸಮಿತಿ ಅಧ್ಯಕ್ಷ ಕೆ. ಕೃಷ್ಣಸ್ವಾಮಿ, ಮುಖ್ಯ ಶಿಕ್ಷಕಿ ವಿನಯ ಸುವರ್ಣ, ಸ್ತ್ರೀ ಸಮಾಜ ಶಾಲೆಯ ಮುಖ್ಯ ಶಿಕ್ಷಕಿ ಎಂ. ಗೀತಾ ಅವರು ಜ್ಯೋತಿಯನ್ನು ಅದ್ದೂರಿಯಿಂದ ಸ್ವಾಗತಿಸಿದರು.

ಭಾರತ ಸೇವಾದಲ ಕೇಂದ್ರ ಸಮಿತಿ ಅಧ್ಯಕ್ಷ ಎಚ್.ಎಂ. ಗುರುಸಿದ್ಧಸ್ವಾಮಿ ಉಪಸ್ಥಿತರಿದ್ದರು.

1857ರಲ್ಲಿ ನಡೆದ ಭಾರತದ ಪ್ರಥಮ ಸ್ವಾತಂತ್ರ್ಯ ಚಳವಳಿಯ 150 ವರ್ಷಗಳ ನೆನಪಿಗೆ ಬಳ್ಳಾರಿಯ ಮಲ್ಲಸಜ್ಜನ ವ್ಯಾಯಾಮ ಶಾಲೆಯು ಅಂಡಮಾನ್ ಸೆಲ್ಯುಲರ್ ಜೈಲಿನಿಂದ ಬಳ್ಳಾರಿ ವರೆಗೆ ಓಟದ ಜ್ಯೋತಿಯನ್ನು ಕೊಂಡೊಯ್ಯುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ.

**DECCAN HERALD**

Monday, September 15, 2008

**National Savings Institute:** Shanthi Nair, Post Master General, South Karnataka Region, Department of Posts at Sanchayika Day, Stree Samaja Middle School, Seshadripuram, 2.30 pm.

**ಪ್ರಜಾವಾಣಿ**

ಸೋಮವಾರ

15ನೇ ಸೆಪ್ಟೆಂಬರ್ 2008

**ರಾಷ್ಟ್ರೀಯ ಉಳಿತಾಯ ಸಂಸ್ಥೆ:** ಸ್ತ್ರೀ ಸಮಾಜ ಮಾಧ್ಯಮಿಕ ಶಾಲೆ, ಶೇಷಾದ್ರಿಪುರ. ಸಂಚಯಿಕ ದಿನ. ಅತಿಥಿಗಳು– ದಕ್ಷಿಣ ಕರ್ನಾಟಕ ವಲಯ ಪೋಸ್ಟ್ ಮಾಸ್ಟರ್ ಜನರಲ್ ಶಾಂತಿ ನಾಯರ್, ಸಂಸ್ಥೆಯ ನಿರ್ದೇಶಕ ಅನಿಲ್ ಭಟ್ಟಾಚಾರ್ಯ, ಶೇಷಾದ್ರಿಪುರ ಶಿಕ್ಷಣ ದತ್ತಿ ಪ್ರಧಾನ ಕಾರ್ಯದರ್ಶಿ ವೂಡೆ ಪಿ. ಕೃಷ್ಣ. ಅಧ್ಯಕ್ಷತೆ– ಶೇಷಾದ್ರಿಪುರ ಶಿಕ್ಷಣ ದತ್ತಿ ಅಧ್ಯಕ್ಷ ಎನ್.ಆರ್. ಪಂಡಿತ್ ಆರಾಧ್ಯ. ಮಧ್ಯಾಹ್ನ 2.30.

**ಉದಯವಾಣಿ**

ಸೋಮವಾರ 15 ಸೆಪ್ಟೆಂಬರ್ 2008

ಶೇಷಾದ್ರಿಪುರ ಶಿಕ್ಷಣ ಟ್ರಸ್ಟ್ ಸ್ತ್ರೀ ಸಮಾಜ ಪ್ರಾಥಮಿಕ ಶಾಲೆ: ಶೇಷಾದ್ರಿಪುರ ಸಭಾಂಗಣ- ಶಾಲೆ ಆವರಣ, ಶೇಷಾದ್ರಿಪುರ. ಸಂಚಾಯಿಕ ದಿನಾಚರಣೆ. ಅಧ್ಯಕ್ಷತೆ: ಶೇಷಾದ್ರಿಪುರ ಶಿಕ್ಷಣ ಟ್ರಸ್ಟ್ ಅಧ್ಯಕ್ಷ ಎನ್.ಆರ್. ಪಂಡಿತ್ ಆರಾಧ್ಯ. ಅತಿಥಿ: ಪೋಸ್ಟ್ ಮಾಸ್ಟರ್ ಜನರಲ್ ಶಾಂತಿ ನಾಯರ್, ಸಂಸ್ಥೆಯ ನಿರ್ದೇಶಕ ಅನಿಲ್ ಭಟ್ಟಾಚಾರ್ಯ, ಟ್ರಸ್ಟ್ ಪ್ರಧಾನ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ. ಮಧ್ಯಾಹ್ನ 2.30.

ಕನ್ನಡಪ್ರಭ, ಶುಕ್ರವಾರ, 12 ಸೆಪ್ಟೆಂಬರ್ 2008

## ಭಾವೆ ಜನ್ಮದಿನ

*ವಿನೋಬಾ ಭಾವೆ ಅವರ 113 ನೇ ಜನ್ಮದಿನದ ನಿಮಿತ್ತ ಭಾವೆ ಅವರ ಭಾವಚಿತ್ರಕ್ಕೆ ಕೇಂದ್ರದ ಮಾಜಿ ಸಚಿವ ಎಂ.ವಿ. ರಾಜಶೇಖರನ್ ಪುಷ್ಪ ಸಮರ್ಪಿಸಿದರು. ಚೆನ್ನಮ್ಮ ಹಳ್ಳಿಕೇರಿ, ಡಾ. ಹೊ. ಶ್ರೀನಿವಾಸಯ್ಯ ಮತ್ತಿತರರು ಇದ್ದಾರೆ.*



ಪ್ರಜಾವಾಣಿ ಶುಕ್ರವಾರ 12ನೇ ಸೆಪ್ಟೆಂಬರ್ 2008




ಕರ್ನಾಟಕ ಗಾಂಧಿ ಸ್ಮಾರಕ ನಿಧಿಯು ಬೆಂಗಳೂರಿನಲ್ಲಿ ಗುರುವಾರ ಹಮ್ಮಿಕೊಂಡಿದ್ದ 'ಸಂತ ವಿನೋಬಾಜೀ ಅವರ 113ನೇ ಜನ್ಮದಿನ ಆಚರಣೆ' ಕಾರ್ಯಕ್ರಮದಲ್ಲಿ ವಿಧಾನ ಪರಿಷತ್ ಸದಸ್ಯ ಎಂ.ವಿ.ರಾಜಶೇಖರನ್ ಅವರು ಸಮಾಜ ಸೇವಕಿ ಚನ್ನಮ್ಮ ಹಳ್ಳಿಕೇರಿ ಅವರನ್ನು ಸನ್ಮಾನಿಸಿದರು. ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ಹೋ. ಶ್ರೀನಿವಾಸಯ್ಯ, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೆ ಪಿ.ಕೃಷ್ಣ,ಗಾಂಧಿ ಸ್ಮಾರಕ ನಿಧಿ ಕಾರ್ಯದರ್ಶಿ ಪ್ರೊ.ಎಚ್.ಆರ್. ದಾಸೇಗೌಡ ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ 12-9-2008




ಬೆಂಗಳೂರಿನ ಗಾಂಧಿ ಭವನದಲ್ಲಿ ಗುರುವಾರ ನಡೆದ ಆಚಾರ್ಯ ವಿನೋಬಾ ಭಾವೆ ಜನ್ಮದಿನಾಚರಣೆ ಸಂದರ್ಭದಲ್ಲಿ ಅವರ ಭಾವಚಿತ್ರಕ್ಕೆ ವಿಧಾನ ಪರಿಷತ್ ಸದಸ್ಯ ಎಂ.ವಿ.ರಾಜಶೇಖರನ್ ಪುಷ್ಪಾರ್ಚನೆ ಮೂಲಕ ನಮನ ಸಲ್ಲಿಸಿದರು. ಪವನಾರ್ ಬ್ರಹ್ಮ ವಿದ್ಯಾಮಂದಿರದ ಚೆನ್ನಮ್ಮ ಹಳ್ಳಿಕೇರಿ, ಹಿರಿಯ ಗಾಂಧಿವಾದಿ ಪ್ರೊ. ಹೊ. ಶ್ರೀನಿವಾಸಯ್ಯ, ಗಾಂಧಿ ಪ್ರತಿಷ್ಠಾನದ ಅಧ್ಯಕ್ಷ ವೂಡೆ ಪಿ. ಕೃಷ್ಣ, ಪ್ರೊ. ಎಚ್.ಆರ್.ದಾಸೇಗೌಡ ಹಾಜರಿದ್ದರು.

ವಿಜಯ ಕರ್ನಾಟಕ | ಶುಕ್ರವಾರ 12 ಸೆಪ್ಟೆಂಬರ್ 2008 | ಬೆಂಗಳೂರು

# ವಿನೋಬಾರ ಆದರ್ಶ ಪ್ರಸ್ತುತ

ವಿಕ ಸುದ್ದಿಲೋಕ

ಬೆಂಗಳೂರು: ಮಾನಸಿಕ ಸಂಘರ್ಷ ಹೆಚ್ಚುತ್ತಿರುವ ಇಂದಿನ ದಿನಗಳಲ್ಲಿ ಆಚಾರ್ಯ ವಿನೋಬಾ ಅವರ ಆದರ್ಶಗಳು ಹೆಚ್ಚು ಪ್ರಸ್ತುತ ಎಂದು ವಿಧಾನ ಪರಿಷತ್ ಸದಸ್ಯ ಎಂ.ವಿ.ರಾಜಶೇಖರನ್ ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಗಾಂಧಿ ಶಾಂತಿ ಪ್ರತಿಷ್ಠಾನ, ಕರ್ನಾಟಕ ಸರ್ವೋದಯ ಮಂಡಲ, ವಿಶ್ವ ನೀಡಂ ಟ್ರಸ್ಟ್ ವಲ್ಲಭ ನಿಕೇತನ ಸಂಸ್ಥೆಗಳು ಜಂಟಿಯಾಗಿ ನಗರದ ಗಾಂಧಿ ಭವನದಲ್ಲಿ ಏರ್ಪಡಿಸಿದ್ದ ಸಂತ ವಿನೋಬಾ ಅವರ 113 ನೇ ಜನ್ಮ ದಿನ ಕಾರ್ಯಕ್ರಮ ಉದ್ಘಾಟಿಸಿ ಗುರುವಾರ ಮಾತನಾಡಿದರು.

ಅಪರಿಗ್ರಹ, ಸತ್ಯ, ಅಹಿಂಸೆ, ಕಾಯಕ ನಿಷ್ಠೆ ಅವರ ಜೀವನದ ಧ್ಯೇಯಗಳಾಗಿದ್ದವು. ಅಂತಹ ಆದರ್ಶಗಳು ಇಂದು ಕಣ್ಮರೆಯಾಗುತ್ತಿವೆ. ಮನುಷ್ಯ ಸ್ವಾರ್ಥಿಯಾಗುತ್ತಿದ್ದಾನೆ. ಸಿರಿವಂತಿಕೆಯ ಅಟ್ಟಹಾಸ ವಾಕರಿಕೆ ತರಿಸುತ್ತದೆ. ದೇಶದ ಶೇ.42 ರಷ್ಟು ಜನತೆ ಬಡತನ ರೇಖೆಗಿಂತ ಕೆಳಗಿದ್ದಾರೆ. ಈ ತಾರತಮ್ಯ ಖಂಡಿಸುವ ಶಕ್ತಿ ಯಾರಲ್ಲೂ ಇಲ್ಲದಿರುವುದು ದುರದೃಷ್ಟಕರ ಎಂದು ವಿಷಾದಿಸಿದರು.

ವಿನೋಭಾ ಅವರ ತಾಯಿ ಕರ್ನಾಟಕದವರೇ ಆಗಿದ್ದರಿಂದ ಅವರಿಗೆ ಕರ್ನಾಟಕ, ಕನ್ನಡದ ಮೇಲೆ ವಿಶೇಷ ಪ್ರೀತಿ ಇತ್ತು. ಕನ್ನಡದಲ್ಲೂ ಸಹಿ ಮಾಡುತ್ತಿದ್ದರು. ಎಂದು ನೆನಪಿಸಿಕೊಂಡರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೊ.ಶ್ರೀನಿವಾಸಯ್ಯ ಮಾತನಾಡಿ, ವಿನೋಬಾರ ಭೂದಾನ ಚಳವಳಿ ದುಡಿವ ಕೈಗಳಿಗೆ ಶಕ್ತಿ ಮತ್ತು ಆತ್ಮಸ್ಥೈರ್ಯ ತಂದುಕೊಟ್ಟಿದೆ. ಭೂದಾನ ಚಳವಳಿ ನಡೆಯದಿದ್ದರೆ ಆಂಧ್ರಪ್ರದೇಶದಲ್ಲಿ ನಕ್ಸಲರ ಚಳವಳಿ ಇನ್ನಷ್ಟು ತೀವ್ರಗೊಳ್ಳುತ್ತಿತ್ತು ಎಂದು ಹೇಳಿದರು.

ಸನ್ಮಾನ ಸ್ವೀಕರಿಸಿ ಮಾತನಾಡಿದ ಪೌವನಾರ್ ಬ್ರಹ್ಮ ವಿದ್ಯಾಮಂದಿರದ ಚೆನ್ನಮ್ಮ ಹಳ್ಳಿಕೇರಿ, ಗಾಂಧಿ ಮತ್ತು ವಿನೋಬಾರ ವಿಚಾರಗಳು ಇಡೀ ವಿಶ್ವಕ್ಕೆ ಬೆಳಕು ಕೊಡುತ್ತವೆ. ಜೈ ಜಗತ್, ಗ್ರಾಮ ಸ್ವರಾಜ್, ವಿಶ್ವಶಾಂತಿ ಮಂತ್ರವನ್ನು ಪ್ರತಿಯೊಬ್ಬರೂ ರೂಢಿಸಿಕೊಳ್ಳಬೇಕು ಎಂದು ಸಲಹೆ ನೀಡಿದರು.

ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೆ ಪಿ.ಕೃಷ್ಣ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಕಾರ್ಯದರ್ಶಿ ಪ್ರೊ.ಎಚ್.ಆರ್.ದಾಸೇಗೌಡ ಪಾಲ್ಗೊಂಡಿದ್ದರು.

ವಿಕ ಚಿತ್ರಲೋಕ




ನಗರದ ಗಾಂಧೀಭವನದಲ್ಲಿ ಗುರುವಾರ ಸಂತ ವಿನೋಬಾ ಅವರ 113ನೇ ಜನ್ಮದಿನದ ಅಂಗವಾಗಿ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಚೆನ್ನಮ್ಮ ಹಳ್ಳಿಕೇರಿ ಅವರನ್ನು ವಿಧಾನ ಪರಿಷತ್ ಸದಸ್ಯ ಎಂ.ವಿ.ರಾಜಶೇಖರನ್ ಸನ್ಮಾನಿಸಿದರು. ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೊ. ಶ್ರೀನಿವಾಸಯ್ಯ, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೆ ಪಿ. ಕೃಷ್ಣ ಮತ್ತು ಗಾಂಧಿ ಸ್ಮಾರಕ ನಿಧಿ ಕಾರ್ಯದರ್ಶಿ ಪ್ರೊ. ಎಚ್. ಆರ್.ದಾಸೇಗೌಡ ಭಾಗವಹಿಸಿದ್ದರು.

ಉದಯವಾಣಿ

ಶುಕ್ರವಾರ 12 ಸೆಪ್ಟೆಂಬರ್ 2008

# 'ಸ್ವರಾಜ್ಯ ಸಿಕ್ಕಿದರೂ ದಕ್ಕದ ಗ್ರಾಮ ಸ್ವರಾಜ್ಯ'




ಬೆಂಗಳೂರಿನಲ್ಲಿ ಗುರುವಾರ ಏರ್ಪಡಿಸಿದ್ದ ವಿನೋಭಾ ಭಾವೆ ಜನ್ಮದಿನೋತ್ಸವ ಕಾರ್ಯಕ್ರಮದಲ್ಲಿ ಚೆನ್ನಮ್ಮ ಹಳ್ಳಿಕೇರಿ ಅವರನ್ನು ಕೇಂದ್ರದ ಮಾಜಿ ಸಚಿವ ಎಂ.ವಿ. ರಾಜಶೇಖರನ್ ಸನ್ಮಾನಿಸಿದರು. ಡಾ. ಹೋ. ಶ್ರೀನಿವಾಸಯ್ಯ, ವೂಡೆ ಪಿ.ಕೃಷ್ಣ, ಪ್ರೊ. ದಾಸೇಗೌಡ ಉಪಸ್ಥಿತರಿದ್ದರು.

ಬೆಂಗಳೂರು, ಸೆ. 11: ದಿಲ್ಲಿ, ಬೆಂಗಳೂರಿಗೆ ಸ್ವರಾಜ್ಯ ಸಿಕ್ಕಿದ ಮೇಲೆ ಗ್ರಾಮ ಸ್ವರಾಜ್ಯ ದಕ್ಕಲೇ ಇಲ್ಲವೆಂದು ಆಚಾರ್ಯ ವಿನೋಬಾ ಭಾವೆ ಒಡನಾಡಿ ಚೆನ್ನಮ್ಮ ಹಳ್ಳಿಕೇರಿ ಹೇಳಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿಯು ವಿವಿಧ ಸಂಸ್ಥೆಗಳ ಸಹಯೋಗದಲ್ಲಿ ಆಯೋಜಿಸಿದ್ದ ವಿನೋಬಾಜಿ ಜಯಂತಿಯಲ್ಲಿ ಸನ್ಮಾನ ಸ್ವೀಕರಿಸಿ ಮಾತನಾಡಿದರು. ಗ್ರಾಮ ಸ್ವರಾಜ್ಯವು ಗಾಂಧೀಜಿ ಹಾಗೂ ವಿನೋಬಾಜಿಯವರ ಕನಸಾಗಿತ್ತು. ಬಡವರು, ಶ್ರೀಮಂತರು ಎಂಬ ಬೇಧದಿಂದಾಗಿ ಇಂದು ಶಾಂತಿ, ಸಮೃದಿ ಸಾಧ್ಯವಾಗಿಲ್ಲ. ಎಲ್ಲಾ ಭಾರತೀಯರು ಮತಬೇಧ ಮರೆತು ಒಗ್ಗಟ್ಟಾದರೆ ಮಾತ್ರ ದೇಶದ ಅಭಿವೃದ್ಧಿ, ಶಾಂತಿ ಸಾಧ್ಯ. ಅಂತಹ ಸಂಕಲ್ಪವನ್ನು ಎಲ್ಲರೂ ಮಾಡಿದರೆ ಜಯಂತಿ ಆಚರಣೆಗೆ ಸಾರ್ಥಕತೆ ಬರುತ್ತದೆ ಎಂದರು.

ಗಾಂಧಿವಾದವೆಂದರೆ ಪ್ರೇಮ ಹಾಗೂ ಸೇವೆ. ಜನರ ಮೇಲೆ ವಿಶ್ವಾಸ, ಪ್ರೇಮವಿಟ್ಟುಕೊಂಡು ನಿಷ್ಕಾಮ ಸೇವೆ ಮಾಡುವುದೇ ಗಾಂಧಿ ತತ್ವ. ವಿನೋಬಾಜಿಯವರು ಜೈಜಗತ್ ಮಂತ್ರ, ಗ್ರಾಮಸ್ವರಾಜ್ಯದ ತಂತ್ರ ಹಾಗೂ ವಿಶ್ವಶಾಂತಿಯ ಲಕ್ಷ್ಯವನ್ನು ನಮಗೆ ಕೊಟ್ಟು ಹೋಗಿದ್ದಾರೆ ಎಂದರು.

ಹಳ್ಳಿಕೇರಿಯವರನ್ನು ಸನ್ಮಾನಿಸಿದ ಮಾಜಿ ಕೇಂದ್ರ ಸಚಿವ ಎಂ.ವಿ. ರಾಜಶೇಖರನ್, ಗಾಂಧೀಜಿಯವರ ಆಧ್ಯಾತ್ಮಿಕ ಉತ್ತರಾಧಿಕಾರಿಯಾಗಿದ್ದ ವಿನೋಬಾಜಿ ಅವರು ಭಾರತೀಯ ಪರಂಪರೆಯ ಬಹುದೊಡ್ಡ ವಕ್ತಾರ. ವಿಶ್ವದಲ್ಲಿ ಮಾನಸಿಕ ಸಂಘರ್ಷ ಹೆಚ್ಚುತ್ತಿರುವ ಸಂದರ್ಭದಲ್ಲಿ ಅವರ ವಿಚಾರ ಹೆಚ್ಚು ಪ್ರಸ್ತುತ. ಆಕಾಶದೆತ್ತರಕ್ಕೆ ಬೆಳೆದ ವಿಶ್ವಮಾನವ ಎಂದು ಬಣ್ಣಿಸಿದರು.

ಸಿರಿವಂತಿಕೆಯ ಅಟ್ಟಹಾಸ ನೋಡಿದರೆ ವಾಕರಿಕೆ ಬರುತ್ತಿದೆ. ಸ್ವಾರ್ಥಿಗಳಾಗಿ ಮಾನವೀಯತೆ ಮರೆಯುತ್ತಿದ್ದೇವೆ. ಶೇ.42 ರಷ್ಟು ಭಾರತೀಯರು ದಿನಕ್ಕೆ 45 ರೂ. ಆದಾಯದಲ್ಲಿ ಬದುಕುತ್ತಿದ್ದಾರೆ. ಆದರೆ ಕೆಲವೇ ಮಂದಿ ಸಾವಿರಾರು ಕೋಟಿ ಖರ್ಚು ಮಾಡುತ್ತಿದ್ದಾರೆ. ಇಂತಹ ಅನಾಗರಿಕ ಅಂತರವನ್ನು ಖಂಡಿಸುವ ನೈತಿಕ ಶಕ್ತಿ ನಮ್ಮಲ್ಲಿ ಯಾರಿಗೂ ಇಲ್ಲವೆಂದು ವಿಷಾದಿಸಿದರು. ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ| ಹೊ. ಶ್ರೀನಿವಾಸಯ್ಯ, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೆ ಪಿ. ಕೃಷ್ಣ ಉಪಸ್ಥಿತರಿದ್ದರು. ಎಚ್.ಆರ್. ದಾಸೇಗೌಡ ಸ್ವಾಗತಿಸಿದರು.

ಸಂಯುಕ್ತ ಕರ್ನಾಟಕ

12-9-2008

# 'ಗ್ರಾಮಸ್ವರಾಜ್' ಆಶಯ ನನಸಿಗೆ ಕರೆ

ಬೆಂಗಳೂರು, ಸೆ. 11– ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿ, ಆಚಾರ್ಯ ವಿನೋಬಾ ಭಾವೆಯವರ ಆಶಯವಾದ 'ಗ್ರಾಮ ಸ್ವರಾಜ್' ನ್ನು ಈಡೇರಿಸುವ ಕೆಲಸ ಮಾಡಬೇಕಾಗಿದೆ ಎಂದು ವಿನೋಬಾ ಭಾವೆಯವರ ಶಿಷ್ಯರಾದ ಚೆನ್ನಮ್ಮ ಹಳ್ಳಿಕೇರಿ ಹೇಳಿದ್ದಾರೆ.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಗಾಂಧಿ ಶಾಂತಿ ಪ್ರತಿಷ್ಠಾನದ ಆಶ್ರಯದಲ್ಲಿ ಗುರುವಾರ ಗಾಂಧಿ ಭವನದಲ್ಲಿ ಹಮ್ಮಿಕೊಳ್ಳಲಾಗಿದ್ದ ಸಂತ ವಿನೋಬಾ ಭಾವೆಯವರ 113ನೇ ಜನ್ಮ ದಿನಾಚರಣೆ ಸಮಾರಂಭದಲ್ಲಿ ಪಾಲ್ಗೊಂಡು ಅವರು ಮಾತನಾಡಿದರು.

ಇಂದು ದಿಲ್ಲಿ ಸ್ವರಾಜ್, ಬೆಂಗಳೂರು ಸ್ವರಾಜ್ ಎಂಬ ಬರೀ ಘೋಷಣೆಯ ನಡುವೆ 'ಗ್ರಾಮ ಸ್ವರಾಜ್' ಪರಿಕಲ್ಪನೆ ಕಣ್ಮರೆ ಆಗುತ್ತಿದೆ ಎಂದು ವಿಷಾದಿಸಿದ ಅವರು, ವಿನೋಬಾ ಭಾವೆಯವರ ಜೈ ಜಗತ್ತು, ಗ್ರಾಮ ಸ್ವರಾಜ್ ಮತ್ತು ವಿಶ್ವ ಶಾಂತಿ ಈ ಮೂರು ಘೋಷಣೆಗಳನ್ನು ಜಾರಿಗೆ ತರಲು ಜನರು ಮತಭೇದ ಮರೆತು ಮುಂದಾಗಬೇಕು ಎಂದರು.

ಕೇಂದ್ರ ಮಾಜಿ ಸಚಿವ ಹಾಗೂ ವಿಧಾನ ಪರಿಷತ್ ಸದಸ್ಯ ಎಂ.ವಿ. ರಾಜಶೇಖರನ್ ಮಾತನಾಡಿ, ಭೂದಾನ ಚಳವಳಿ ಮೂಲಕ ಕ್ರಾಂತಿಯನ್ನುಂಟು ಮಾಡಿದ ಆಚಾರ್ಯ ವಿನೋಬಾ ಭಾವೆ ಭಾರತೀಯ ಪರಂಪರೆಯ ಅತಿ ದೊಡ್ಡ ವಕ್ತಾರರು. ಆಧ್ಯಾತ್ಮಿಕ ಚಿಂತನೆಯ ಮೂಲಕ ಆಕಾಶದೆತ್ತರಕ್ಕೆ ಬೆಳೆದ ವಿಶ್ವಮಾನ್ಯರು ಎಂದು ಅಭಿಪ್ರಾಯಪಟ್ಟರು.




ಬೆಂಗಳೂರಿನ ಗಾಂಧಿ ಭವನದಲ್ಲಿ ಗುರುವಾರ ನಡೆದ ಆಚಾರ್ಯ ವಿನೋಬಾ ಭಾವೆಯವರ 113ನೇ ಜನ್ಮದಿನಾಚರಣೆ ಸಮಾರಂಭದಲ್ಲಿ ಅವರ ಶಿಷ್ಯರಾದ ಚೆನ್ನಮ್ಮ ಹಳ್ಳಿಕೇರಿ ಅವರನ್ನು ಸನ್ಮಾನಿಸಲಾಯಿತು. ವಿಧಾನ ಪರಿಷತ್ ಸದಸ್ಯ ಎಂ.ವಿ. ರಾಜಶೇಖರನ್, ಹಿರಿಯ ಗಾಂಧಿವಾದಿ ಡಾ. ಹೊ. ಶ್ರೀನಿವಾಸಯ್ಯ, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೆ ಪಿ. ಕೃಷ್ಣ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಕಾರ್ಯದರ್ಶಿ ಪ್ರೊ. ಎಚ್.ಆರ್. ದಾಸೇಗೌಡ ಉಪಸ್ಥಿತರಿದ್ದರು.

ಸ್ವಾರ್ಥಿಗಳು ಸಿರಿವಂತಿಕೆಯ ಅಟ್ಟಹಾಸದಂತಹ ಅನಾಗರಿಕರ ದುಸ್ಥಿತಿಯು ಸಾಮಾಜಿಕ ಅರಾಜಕತೆಗೆ ಕಾರಣ. ಇಂದು ಕಡುಬಡತನದಲ್ಲಿ ಬೇಯುತ್ತಿರುವವರ ನಡುವೆ ಸಿರಿವಂತಿಕೆ ಜನರ ಅಟ್ಟಹಾಸದಲ್ಲಿ ಮೆರೆಯುತ್ತಿದೆ. ಶ್ರೀಮಂತರ ಅನಾಗರಿಕ ವರ್ತನೆ ಖಂಡಿಸುವ ಧೈರ್ಯ ಸಮ್ಮಗ್ರಗೆ ಇಲ್ಲದಂತಾಗಿದೆ. ಇಂತಹ ಸಂದರ್ಭದಲ್ಲಿ ವಿನೋಬಾ ಭಾವೆಯವರ ವಿಚಾರಧಾರೆ ಅಗತ್ಯವಿದೆ ಎಂದು ಹೇಳಿದರು.

ಸಂತ ವಿನೋಬಾ ಭಾವೆ ಅವರಿಗೆ ಕರ್ನಾಟಕ ಮತ್ತು ಕನ್ನಡದ ಬಗ್ಗೆ ವಿಶೇಷ ಪ್ರೀತಿ ಇತ್ತು. ಅವರು ತಾಯಿ ರುಕ್ಮಿಣಿಬಾಯಿ ಬಿಜಾಪುರದವರು. ಅವರು ಕನ್ನಡದಲ್ಲೇ ಸಹಿ ಮಾಡುತ್ತಿದ್ದರು. ಗಾಂಧೀಜಿಗೆ ರಾಜಕೀಯ ಮತ್ತು ಆಧ್ಯಾತ್ಮಿಕಕ್ಕೆ ಇಬ್ಬರು ಉತ್ತರಾಧಿಕಾರಿಗಳು. ಅದರಲ್ಲಿ ನೆಹರು ರಾಜಕೀಯಕ್ಕೆ ಸೇರಿದ್ದರೆ, ವಿನೋಬಾ ಭಾವೆಯವರು ಆಧ್ಯಾತ್ಮಿಕಕ್ಕೆ ಸೇರಿದ್ದರು. ಅವರು ಗಾಂಧೀಜಿಯವರ ತತ್ವ, ಆದರ್ಶಗಳನ್ನು ಬದುಕಿನಲ್ಲಿ ಅಳವಡಿಸಿಕೊಂಡು ಆಧ್ಯಾತ್ಮಿಕ ಚಿಂತನೆಗೆ ಪ್ರೇರಕ ಶಕ್ತಿ ಆಗಿದ್ದರು ಎಂದರು.

ಹಿರಿಯ ಗಾಂಧಿವಾದಿ ಹಾಗೂ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ಹೊ. ಶ್ರೀನಿವಾಸಯ್ಯ ಮಾತನಾಡಿ, ವಿನೋಬಾ ಭಾವೆಯವರು ಗಾಂಧಿ ಮಾರ್ಗದಲ್ಲಿ ಸತ್ಯ ಮತ್ತು ಅಹಿಂಸೆಯ ಮೂಲಕ ಕ್ರಾಂತಿ ಮಾಡಿದ ಮಹಾನ್ ಶಕ್ತಿ. ಭೂದಾನ ಚಳವಳಿಯಿಂದ ನಕ್ಸಲೀಯ ಚಟುವಟಿಕೆಗಳಿಗೆ ಕಡಿವಾಣ ಹಾಕಿದರು. ಸ್ತ್ರೀಶಕ್ತಿ ಏನು ಎಂಬುದನ್ನು ಅವರು ತಮ್ಮ ಆಶ್ರಮವಾದ ಪವನಾರ್‌ನಲ್ಲಿ ತೋರಿಸಿಕೊಟ್ಟರು.

ಗ್ರಾಮ ಸ್ವರಾಜ್ ಚಿಂತನೆ ಅವರ ಆದ್ಯ ಧ್ಯೇಯವಾಗಿತ್ತು. ಅವರ ವಿಚಾರಧಾರೆಗಳು ಇಂದಿನ ಯುವಜನರಿಗೆ ಮಾರ್ಗದರ್ಶಕ ಆಗಬೇಕು ಎಂದು ನುಡಿದರು.

ಸಮಾರಂಭದಲ್ಲಿ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೆ ಪಿ. ಕೃಷ್ಣ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಕಾರ್ಯದರ್ಶಿ ಪ್ರೊ. ಎಚ್.ಆರ್. ದಾಸೇಗೌಡ ಮತ್ತಿತರರು ಉಪಸ್ಥಿತರಿದ್ದರು. ಇದೇ ಸಂದರ್ಭದಲ್ಲಿ ಆಚಾರ್ಯ ವಿನೋಬಾ ಭಾವೆ ಅವರ ಶಿಷ್ಯರಾದ ಚೆನ್ನಮ್ಮ ಹಳ್ಳಿಕೇರಿ ಅವರನ್ನು ಸನ್ಮಾನಿಸಲಾಯಿತು.




ಗಾಂಧಿ ಭವನದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟಗಾರ ಸಂತ ವಿನೋಭಾಜೀ ಅವರ 113ನೆ ಜನ್ಮ ದಿನಾಚರಣೆಯಲ್ಲಿ ವಿಧಾನ ಪರಿಷತ್ ಸದಸ್ಯ ಎಂ.ವಿ.ರಾಜಶೇಖರನ್, ಡಾ.ಹೋ.ಶ್ರೀನಿವಾಸಯ್ಯ, ಹೊಡೇ ಪಿ.ಕೃಷ್ಣ, ಚನ್ನಮ್ಮ ಹಳ್ಳಿಕೇರಿ ಅವರು ಭಾವ ಚಿತ್ರಕ್ಕೆ ಪುಷ್ಪನಮನ ಸಲ್ಲಿಸಿದರು.

# ಸಂತ ವಿನೋಭಾ ಜೀ ಮಹಾನ್ ದೇಶ ಭಕ್ತ

ಬೆಂಗಳೂರು, ಸೆ.11- ಸಂತ ವಿನೋಭಾಜೀ ಅವರು ಅಪ್ರತಿಮ ಸ್ವಾತಂತ್ರ್ಯ ಹೋರಾಟಗಾರರಾಗಿದ್ದರು. ಇವರು ದೇಶಕ್ಕಾಗಿ ತನು-ಮನ-ಧನವನ್ನು ಅರ್ಪಿಸಿಕೊಂಡ ಮಹಾನ್ ದೇಶಭಕ್ತ ಎಂದು ವಿಧಾನಪರಿಷತ್ ಸದಸ್ಯ ಎಂ.ವಿ.ರಾಜಶೇಖರನ್ ಇಂದಿಲ್ಲಿ ಸ್ಮರಿಸಿಕೊಂಡರು.

ನಗರದ ಗಾಂಧಿ ಭವನದಲ್ಲಿ ಏರ್ಪಡಿಸಿದ್ದ ಸ್ವಾತಂತ್ರ್ಯ ಹೋರಾಟಗಾರ ಸಂತವಿನೋಭಾಜೀ ಅವರ 113ನೆ ಜನ್ಮದಿನಾಚರಣೆಯನ್ನು ಉದ್ಘಾಟಿಸಿ ಅವರು ಮಾತನಾಡಿದರು.

ಸಂತ ವಿನೋಭಾಜೀ ಅವರನ್ನು ಮಹಾತ್ಮಗಾಂಧೀಜಿ ಅವರು ತನ್ನ ಉತ್ತರಾಧಿಕಾರಿ ಎಂದು ಘೋಷಣೆ ಮಾಡಿದ್ದರು. ದೇಶದ ಒಳಿತಿಗಾಗಿ ಹಲವಾರು ಹೋರಾಟಗಳನ್ನು ಮಾಡಿ ಯಶಸ್ವಿಯಾಗಿದ್ದರು. ಅವರು ಗಾಂಧೀಜಿಯವರಂತೆ ಸತ್ಯ-ಅಹಿಂಸೆಯ ಪ್ರತಿಪಾದಕರಾಗಿದ್ದರು ಎಂದು ಎಂ.ವಿ.ರಾಜಶೇಖರನ್ ನೆನಪಿಸಿಕೊಂಡರು.

ಕನ್ನಡ ಭಾಷೆ ಬಗ್ಗೆ ಅಪಾರ ಕಾಳಜಿ ಹೊಂದಿದ್ದ ವಿನೋಭಾಜೀ ಕನ್ನಡದಲ್ಲೇ ಸಹಿ ಮಾಡುತ್ತಿದ್ದರು. ಭಾರತೀಯ ಸಂಸ್ಕೃತಿ, ಪರಂಪರೆಯ ವಕ್ತಾರರಾಗಿದ್ದರು. ಸರಳ ಸಜ್ಜನಿಕೆಯ ನೇರ ನಡೆ-ನುಡಿಯ ವ್ಯಕ್ತಿತ್ವ ಹೊಂದಿದ್ದ ಅವರು, ಯಾವುದೇ ಆಡಂಬರ, ಪ್ರಚಾರ ಪ್ರಿಯರಾಗದೆ ಅಸ್ಪೃಶ್ಯತೆಯ ವಿರುದ್ಧ ನಿರಂತರ ಪ್ರಾಮಾಣಿಕ ಹೋರಾಟ ಮಾಡಿದ್ದರು ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಇಂದು ಸ್ವಾತಂತ್ರ್ಯ ಬಂದು ಆರು ದಶಕ ಕಳೆದರೂ ದೇಶದಲ್ಲಿ ಅಸಮಾನತೆ ತಾಂಡವವಾಡುತ್ತಿದೆ. ಕೋಮು ಸಂಘರ್ಷ ಹೆಚ್ಚಾಗುತ್ತಿದೆ. ಸಾವಿರಾರು ಕೋಟಿಗಳನ್ನು ವೆಚ್ಚ ಮಾಡುತ್ತಿದ್ದರೂ ಇನ್ನೂ ಅಸಮಾನತೆ ತೊಲಗಿಸಲು ಸಾಧ್ಯವಾಗಿಲ್ಲ, ಈ ಬಗ್ಗೆ ನಮ್ಮವರಿಗೆ ಕಾಳಜಿ ಇಲ್ಲ, ದೇಶದಲ್ಲಿ ಶೇ.42ರಷ್ಟು ಬಡತನವಿದ್ದು, ನಮ್ಮದು ಬಡ ರಾಷ್ಟ್ರವಾಗುತ್ತಿದೆ. ಬದ್ಧತೆ ಕೊರತೆಯಿಂದ ಬಡತನ ನಿರ್ಮೂಲನೆ ಮಾಡಲು ಸಾಧ್ಯವಾಗುತ್ತಿಲ್ಲ, ಇನ್ನಾದರೂ ಬಡತನ ತೊಲಗಿಸಲು ನಾವೆಲ್ಲರೂ ಒಟ್ಟಾಗಿ ಬದ್ಧತೆಯಿಂದ ಕೆಲಸ ಮಾಡಬೇಕಾಗಿದೆ ಎಂದು ಅವರು ಅಭಿಪ್ರಾಯಪಟ್ಟರು.

ಈ ಸಂದರ್ಭದಲ್ಲಿ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೋ.ಶ್ರೀನಿವಾಸಯ್ಯ, ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಹೊಡೆ ಪಿ.ಕೃಷ್ಣ, ಚನ್ನಮ್ಮ ಹಳ್ಳಿಕೇರಿ ಮತ್ತಿತರರು ಉಪಸ್ಥಿತರಿದ್ದರು.

ಕರುನಾಡ ಸಂಜೆ

ಗುರುವಾರ: 11-09-2008




ಬೆಂಗಳೂರಿನ ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದ ಸಂತ ವಿನೋಬಾ ಭಾವೆ ಅವರ 113ನೇ ಜನ್ಮ ದಿನಾಚರಣೆಯಲ್ಲಿ ವಿನೋಬಾ ಭಾವಚಿತ್ರಕ್ಕೆ ವಿಧಾನ ಪರಿಷತ್ ಸದಸ್ಯ ಎಂ.ವಿ.ರಾಜಶೇಖರನ್ ನಮನ ಸಲ್ಲಿಸಿದರು.

ಸಂಯುಕ್ತ ಕರ್ನಾಟಕ, ಬೆಂಗಳೂರು

6-9-2008



ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಮತ್ತು ಮ್ಯಾನ್‌ಹಟನ್ ಅಸೋಸಿಯೇಟ್ಸ್ ವತಿಯಿಂದ ಬೆಂಗಳೂರಿನಲ್ಲಿ ಸ್ವಯಂ ಪ್ರೇರಿತ ರಕ್ತದಾನ ಶಿಬಿರ ನಡೆಯಿತು. ಈ ಸಂದರ್ಭದಲ್ಲಿ ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ ಗೌರವ ಖಜಾಂಚಿ ರಾಜು ಚಂದ್ರಶೇಖರ್, ಮ್ಯಾನ್‌ಹಟನ್ ಪ್ರಬಂಧಕ ಪ್ರಶಾಂತ್ ನಾಯಕ್ ಇತರರು ಉಪಸ್ಥಿತರಿದ್ದರು.

# ನ್ಯಾನೊ ವಸ್ತುಗಳ ತಯಾರಿಕೆಗೆ ಸಹಕರಿಸಿ

ಬೆಂಗಳೂರು: ನ್ಯಾನೊ ವಸ್ತುಗಳನ್ನು ಬೃಹತ್ ಪ್ರಮಾಣದಲ್ಲಿ ತಯಾರಿಸುವಂತೆ ಸರಕಾರ ಪ್ರೋತ್ಸಾಹಿಸಬೇಕು ಎಂದು ವಿಜ್ಞಾನಿ ಪ್ರೊ. ಸಿ.ಎನ್.ಆರ್. ರಾವ್ ಸಲಹೆ ನೀಡಿದರು.

ಶೇಷಾದ್ರಿಪುರ ಪ್ರಥಮದರ್ಜೆ ಕಾಲೇಜು ಏರ್ಪಡಿಸಿದ್ದ ಮೂರು ದಿನಗಳ ರಾಷ್ಟ್ರಮಟ್ಟದ ನ್ಯಾನೊ ಬಯೋಟೆಕ್ನಾಲಜಿ ಕಾರ್ಯಾಗಾರ ಉದ್ಘಾಟಿಸಿ ಅವರು ಮಾತನಾಡಿದರು.

ಸಣ್ಣ ವಸ್ತುಗಳ ಕುರಿತಾದ ಸಂಶೋಧನೆ ಭಾರತದ ಮುಂದಿನ ತಾಂತ್ರಿಕ ಅಭಿವೃದ್ಧಿಗೆ ನಾಂದಿ ಹಾಡಲಿದೆ ಎಂದ ಅವರು, ಭೌತ ಶಾಸ್ತ್ರ ರಸಾಯನ ಶಾಸ್ತ್ರ ಹಾಗೂ ಜೀವಶಾಸ್ತ್ರಗಳ ಅಡಿಪಾಯದ ಮೇಲೆ ಬೆಳೆಸಬಹುದಾದ ಜೈವಿಕ ತಂತ್ರಜ್ಞಾನ ಕ್ಷೇತ್ರದಲ್ಲಿ ಯುವಕರಿಗೆ ಉಜ್ವಲ ಭವಿಷ್ಯವಿದೆ ಎಂದು ತಿಳಿಸಿದರು.

ಐಟಿ ಮತ್ತು ಬಿಟಿ ಕಾರ್ಯದರ್ಶಿ ಅಶೋಕ್‌ಕುಮಾರ್ ಸಿ. ಮನೋಳಿ ಮಾತನಾಡಿ, ವಿದ್ಯಾರ್ಥಿಗಳು ನ್ಯಾನೊ ಬಯೊಟೆಕ್ನಾಲಜಿ ಕ್ಷೇತ್ರದಲ್ಲಿರುವ ಅಪಾರ ಅವಕಾಶಗಳ ಕುರಿತು ವಿಚಾರ ವಿನಿಮಯ ಮಾಡಬೇಕೆಂದು ಕರೆ ನೀಡಿದರು.



**ಶೇಷಾದ್ರಿಪುರ ಪ್ರಥಮದರ್ಜೆ ಕಾಲೇಜು ಏರ್ಪಡಿಸಿದ್ದ ರಾಷ್ಟ್ರಮಟ್ಟದ ನ್ಯಾನೊ ಬಯೋಟೆಕ್ನಾಲಜಿ ಕಾರ್ಯಾಗಾರವನ್ನು ಪ್ರೊ. ಸಿ.ಎನ್.ಆರ್. ರಾವ್ ಉದ್ಘಾಟಿಸಿದರು. ಅಶೋಕ್‌ಕುಮಾರ್ ಸಿ. ಮನೋಳಿ, ಎನ್.ಆರ್. ಪಂಡಿತಾರಾಧ್ಯ, ವೂಡೆ ಪಿ. ಕೃಷ್ಣ ಎ.ಆರ್. ಶ್ರೀನಿವಾಸಯ್ಯ, ಡಾ. ಎಂ. ಪ್ರಕಾಶ್ ಉಪಸ್ಥಿತರಿದ್ದರು.**

ರಾಜ್ಯ ಸರಕಾರವು ಹೊರ ಹೊಮ್ಮುತ್ತಿರುವ ಈ ಹೊಸ ತಾಂತ್ರಿಕ ಕ್ಷೇತ್ರಗಳಿಗೆ ಹೆಚ್ಚಿನ ಒತ್ತು ನೀಡಿ, ಅಭಿವೃದ್ಧಿ ಕಾರ್ಯಗಳು ಸಾಕಾರಗೊಳ್ಳಲು ಕೈಜೋಡಿಸಬೇಕು ಎಂದು ಹೇಳಿದರು.

ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಪ್ರಧಾನ ಕಾರ್ಯದರ್ಶಿ ವೂಡೆ ಪಿ. ಕೃಷ್ಣ ಸಹ ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ, ಪ್ರಿನ್ಸಿಪಾಲ್ ಡಾ. ಎಂ. ಪ್ರಕಾಶ್, ಪ್ರೊ. ಸಂತನು ದಾಸ್ ಮತ್ತು ಪ್ರೊ. ಸಲ್ಮಾ ಬಾನು ಉಪಸ್ಥಿತರಿದ್ದರು.

ಉದಯವಾಣಿ | ನಮ್ಮ ಬೆಂಗಳೂರು | ಸೆಪ್ಟೆಂಬರ್ 2, 2008



# ಬೆಂಗಳೂರು ಇತಿಹಾಸ ಮಾಲೆ

ಸುರೇಶ್ ಮೂನ sureshmoona@gmail.com

ಬೆಂಗಳೂರಿನ ಹೆಮ್ಮೆಯ ಸಂಸ್ಥೆಗಳು: ಶೇಷಾದ್ರಿಪುರಂ ಶಿಕ್ಷಣ ದತ್ತಿ

## [illegible]

ಶೇಷಾದ್ರಿಪುರಂ ಶಿಕ್ಷಣ ದತ್ತಿಯನ್ನು ಟಿ.ಗೋವಿಂದರಾವ್, ಜಿ.ಮಲ್ಲಿಕಾರ್ಜುನಯ್ಯ, ಬಿ.ಕೃಷ್ಣಸ್ವಾಮಿ ಅಯ್ಯಂಗಾರ್, ಧರ್ಮಪ್ರಕಾಶ, ಎಂ.ವಿ.ವೀರಪ್ಪ, ಸಿ.ಡಿ.ಗೋಪಾಲ ಅಯ್ಯಂಗಾರ್, ಕೆ.ಎಂ.ನಂಜಪ್ಪ, ಟಿ.ವಿ.ಮಾರುತಿ ಇವರುಗಳು ಅಧ್ಯಕ್ಷರಾಗಿಯೂ, ಪ್ರೊ|| ಸಿ.ಗೋಪಾಲಕೃಷ್ಣನ್, ಎನ್.ವಿ. ರಾಮಚಂದ್ರರಾವ್, ಎಸ್.ಸುಬ್ರಹ್ಮಣ್ಯಮ್, ಎಂ.ಜಿ.ಸಂಪತ್ ಕುಮಾರನ್, ಕೆ.ಎಸ್.ಕುಮಾರನ್, ಎಚ್.ಎಸ್.ವೆಂಕಟರಾವ್, ಎಚ್.ಕೃಷ್ಣರಾವ್, ಕೆ.ಸಿ.ಪುಟ್ಟನರಸಯ್ಯ, ಸಿ.ಪುರುಷೋತ್ತಮ್ ಕಾರ್ಯದರ್ಶಿಗಳಾಗಿಯೂ ಜವಾಬ್ದಾರಿಯನ್ನು ವಹಿಸಿಕೊಂಡು ದತ್ತಿಯ ಎಲ್ಲ ಶಿಕ್ಷಣ ಸಂಸ್ಥೆಗಳ ಪ್ರಗತಿಗೆ ತಮ್ಮ ಅಮೂಲ್ಯ ಕೊಡುಗೆಯನ್ನು ನೀಡಿದ್ದಾರೆ. ಪ್ರಸ್ತುತ ಎನ್.ಆರ್.ಪಂಡಿತ್ ಆರಾಧ್ಯ ಅವರು ಅಧ್ಯಕ್ಷರಾಗಿಯೂ, ವೂಡೆ.ಪಿ.ಕೃಷ್ಣ ಕಾರ್ಯದರ್ಶಿಗಳಾಗಿಯೂ, ಇವರೊಂದಿಗೆ ಶಿಕ್ಷಣ ತಜ್ಞರು ಗಣ್ಯ ವ್ಯಕ್ತಿಗಳೂ, ಆಡಳಿತ ಮಂಡಳಿಯಲ್ಲಿದ್ದು ದತ್ತಿಯ ಎಲ್ಲಾ ಶಿಕ್ಷಣ ಸಂಸ್ಥೆಗಳನ್ನು ಮತ್ತಷ್ಟು ಸಮರ್ಪಕವಾಗಿಯೂ ನಿರ್ವಹಿಸುತ್ತಿದ್ದು ಅದರ ಸರ್ವತೋಮುಖ ಅಭಿವೃದ್ಧಿಯ ಕಾರ್ಯದಲ್ಲಿ ಸಕ್ರಿಯವಾಗಿ ತೊಡಗಿದ್ದಾರೆ. ಈ ದತ್ತಿಯ ಮಿಷನ್ ಸ್ಟೇಟ್‌ಮೆಂಟ್‌ನಲ್ಲಿ ಅತ್ಯುತ್ತಮ ಗುಣಮಟ್ಟದ ಶಿಕ್ಷಣವನ್ನು ಸಮಾಜದ ಎಲ್ಲಾ ಸ್ತರದ ಜನರಿಗೂ ನೀಡುತ್ತಾ ಜಾಗತಿಕ ಮಟ್ಟದ ಒಂದು ಉತ್ಕೃಷ್ಟ ಸಂಸ್ಥೆಯಾಗಿ ಇದನ್ನು ರೂಪಿಸುವುದನ್ನು ಮೂಲ ಉದ್ದೇಶವಾಗಿಟ್ಟುಕೊಂಡಿರುವುದನ್ನು ಕಾಣಬಹುದು. ಈ ಹಿನ್ನೆಲೆಯಲ್ಲಿ ಈ ಸಂಸ್ಥೆಯ ಇತ್ತೀಚಿನ ಬೆಳವಣಿಗೆಗಳನ್ನು ಮತ್ತು ಸಾಧನೆಗಳನ್ನು ಈಗಿನ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳು ದತ್ತಿಯ ಪರವಾಗಿ ತಿಳಿಸಿಕೊಡುತ್ತಾರೆ.

ಪ್ರಸ್ತುತ ಈ ದತ್ತಿಯಲ್ಲಿ ಒಟ್ಟು 24 ಶಿಕ್ಷಣ ಸಂಸ್ಥೆಗಳಿದ್ದು, ಇಪ್ಪತ್ತು ಸಾವಿರ ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದಾರೆ. ಒಂದು ಸಾವಿರ ಸಿಬ್ಬಂದಿ ವರ್ಗದವರಿದ್ದಾರೆ. ಶೇಷಾದ್ರಿಪುರಂ ಪ್ರದೇಶದಲ್ಲಷ್ಟೇ ಅಲ್ಲದೆ ಯಲಹಂಕ, ಮಾಗಡಿ ರಸ್ತೆ, ಕೆಂಗೇರಿ ಉಪನಗರಗಳಲ್ಲಿ ಈ ದತ್ತಿಯ ಶಿಕ್ಷಣ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. ಹೆಚ್ಚು ಜನರಿಗೆ ಹೆಚ್ಚು ಒಳಿತನ್ನು ನೀಡುವ ಮೂಲಧ್ಯೇಯವನ್ನು ಹೊಂದಿರುವ ಈ ದತ್ತಿ ಶಾಲಾ ಕಾಲೇಜುಗಳನ್ನು ನಿರ್ಮಿಸಲು ತುಮಕೂರು, ಮೈಸೂರು, ಮಂಡ್ಯ ನಗರಗಳಲ್ಲೂ ಭೂಮಿಯನ್ನು ಖರೀದಿಸಿದೆ.

2004-2005ರಲ್ಲಿ ದತ್ತಿಯ ಶಿಕ್ಷಣ ಸಂಸ್ಥೆಗಳ ಸಮೂಹಕ್ಕೆ ಹೊಸದಾಗಿ ಸೇರ್ಪಡೆಯಾದ ಸಂಸ್ಥೆಗಳೆಂದರೆ ಕೆಂಗೇರಿಯ ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಬಿಸಿನೆಸ್ ಸ್ಟಡೀಸ್, ಮಾಗಡಿ ರಸ್ತೆಯ ಶೇಷಾದ್ರಿಪುರಂ ಕಾಮರ್ಸ್ ಕಾಲೇಜು, ಗಲ್ಲಿಸ್ ಸ್ಕೂಲ್ ಸ್ಟ್ರೀಟ್‌ನ ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಕಾಮರ್ಸ್ ಅಂಡ್ ಮ್ಯಾನೇಜ್‌ಮೆಂಟ್, ಯಲಹಂಕದಲ್ಲಿನ ಪಬ್ಲಿಕ್ ಸ್ಕೂಲ್ ಹಾಗೂ ನ್ಯಾಷನಲ್ ಕೌನ್ಸಿಲ್ ಆಫ್ ಟೀಚಿಕಲ್ ಎಜುಕೇಷನ್ ಹಾಗೂ ರಾಜ್ಯ ಸರ್ಕಾರದ ಮಾನ್ಯತೆ ಪಡೆದು ಇಂಗ್ಲಿಷ್ ಮಾಧ್ಯಮದಲ್ಲಿ ಐವತ್ತು ವಿದ್ಯಾರ್ಥಿಗಳಿಗೆ ಡಿಇಡಿ ಶಿಕ್ಷಣ ನೀಡಲು ಪ್ರಾರಂಭಿಸಿದ ಶೇಷಾದ್ರಿಪುರಂ ಟೀಚರ್ಸ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್ ಐಸಿಟಿಇ ಮಾನ್ಯತೆ ಪಡೆದು ಹಾಗೂ ಬೆಂಗಳೂರು ವಿ.ವಿಗೆ ಸೇರಿದ ಎಂ.ಬಿ.ಎ ಕೋರ್ಸ್ ನಡೆಸಲು ಸೂಕ್ತ ರೀತಿಯಲ್ಲಿ ಯಲಹಂಕದ ಪ್ಲಾಟಿನಮ್ ಜ್ಯೂಬಿಲಿ ಬ್ಲಾಕ್ ಅನ್ನು ನಿರ್ಮಿಸಲಾಗಿದೆ. ವಿಜ್ಞಾನ ಕ್ಷೇತ್ರದಲ್ಲಾಗುತ್ತಿರುವ ಕ್ಷಿಪ್ರ ಬೆಳವಣಿಗೆಗಳು ಹಾಗೂ ಸಂಶೋಧನೆಗಳಿಗನುಗುಣವಾಗಿ ದತ್ತಿಯು ಬಯೋಟೆಕ್ನಾಲಜಿ ಮತ್ತು ಜೆನೆಟಿಕ್ ಕೋರ್ಸ್‌ಗಳನ್ನು ಯಲಹಂಕ ಕಾಲೇಜಿನಲ್ಲಿ ಪ್ರಾರಂಭಿಸಿದೆ. ಇತ್ತೀಚೆಗೆ ಈ ಸಂಸ್ಥೆಯಲ್ಲಿ ಈ ವಿಷಯದ ಸಂಬಂಧವಾಗಿ ನಡೆದ ಕಾರ್ಯಕ್ರಮವೊಂದರಲ್ಲಿ ಭಾರತದ ಖ್ಯಾತ ವಿಜ್ಞಾನಿಗಳೂ, ಬೆಂಗಳೂರಿನ ಹೆಮ್ಮೆಯ ಕನ್ನಡಿಗರೂ ಆಗಿರುವ ಸಿ.ಎನ್.ಆರ್.ರಾವ್ ಭಾಗವಹಿಸಿದ್ದರು. ಎನ್.ಆರ್.ಪಂಡಿತ್ ಆರಾಧ್ಯ ಮತ್ತು ವೂಡೆ.ಪಿ.ಕೃಷ್ಣರವರು ದತ್ತಿಯ ಪರವಾಗಿ ನೆನಪಿನ ಕಾಣಿಕೆಯನ್ನು ಸ್ವೀಕರಿಸಿ ಮಾತನಾಡಿದ ಸಿ.ಎನ್.ಆರ್.ರಾವ್ ಈ ದತ್ತಿಯ ಹಿರಿಮೆಯನ್ನೂ, ವಿಜ್ಞಾನದ ಶಿಕ್ಷಣಕ್ಕೆ ಇದು ನೀಡುತ್ತಿರುವ ಮಹತ್ವವನ್ನೂ ಶ್ಲಾಘಿಸಿದರು. ಕಾಲೇಜುಗಳ ಗುಣಮಟ್ಟವನ್ನು ವಿಶ್ಲೇಷಿಸಿ ಗ್ರೇಡ್ ನೀಡುವ ನ್ಯಾಕ್ ಸಮಿತಿಯು ಶೇಷಾದ್ರಿಪುರದಲ್ಲಿರುವ ಈ ದತ್ತಿಯ ಕಾಲೇಜಿಗೆ ಬಿ ಪ್ಲಸ್ ಪ್ಲಸ್‌ನ್ನೂ ಅದರ ಸಂಜೆ ಕಾಲೇಜಿಗೆ ಬಿ ಗ್ರೇಡನ್ನೂ ಐದು ವರ್ಷಗಳ ಅವಧಿಗೆ ನೀಡಿದೆ.




ವೂಡೆ ಪಿ.ಕೃಷ್ಣ, ಪ್ರೊ|| ಸಿ.ಎನ್.ಆರ್. ರಾವ್, ಎನ್.ಆರ್.ಪಂಡಿತ್ ಆರಾಧ್ಯ

ಇಂತಹ ಉತ್ತಮ ಫಲಿತಾಂಶ ಬರಬೇಕಾದರೆ ಶಿಕ್ಷಕರೂ ಪ್ರಚಲಿತ ವಿದ್ಯಮಾನಗಳನ್ನು ಅರಿತವರೂ ಸುಧಾರಿತ ಬೋಧನಾಕ್ರಮವನ್ನು ಅಳವಡಿಸಿಕೊಳ್ಳುವವರೂ ಆಗಿರಬೇಕೆಂಬ ಉದ್ದೇಶದಿಂದ ಆಗಾಗ್ಗೆ ದತ್ತಿಯು ಪುನಶ್ಚೇತನ ಶಿಬಿರ ಹಾಗೂ ಕಾರ್ಯಾಗಾರಗಳನ್ನು ನಡೆಸುತ್ತದೆ. ನಗರದ ಹಲವಾರು ಹೆಸರಾಂತ ವಿಷಯ ತಜ್ಞರು ಹಾಗೂ ಗಣ್ಯರು ಇವುಗಳಲ್ಲಿ ಪಾಲ್ಗೊಂಡು ಮಾರ್ಗದರ್ಶನ ನೀಡುತ್ತಾರೆ. ದತ್ತಿಯ ವಿವಿಧ ಸಂಸ್ಥೆಗಳಲ್ಲಿ ಈಗಾಗಲೇ ಸುಮಾರು 25 ಪಿ.ಹೆಚ್.ಡಿ ಪಡೆದವರಿದ್ದು ಇತರರಿಗೂ ಎಂ.ಫಿಲ್, ಪಿ.ಹೆಚ್.ಡಿಗಳನ್ನು ಪಡೆಯಲು ಆಡಳಿತ ಮಂಡಳಿ ಪ್ರೋತ್ಸಾಹ ನೀಡುತ್ತದೆ. ಹಾಗೆಯೇ ರಾಷ್ಟ್ರ ಹಾಗು ಅಂತಾರಾಷ್ಟ್ರೀಯ ಮಟ್ಟದಲ್ಲಿ ಪ್ರಬಂಧಗಳನ್ನು ಮಂಡಿಸಲು ಹೋಗುವವರಿಗೆ ವಿಶೇಷ ಆರ್ಥಿಕ ನೆರವು ನೀಡಲಾಗುತ್ತದೆ. ದತ್ತಿ ಮತ್ತು ಶಿಕ್ಷಕ ವೃಂದದ ನಡುವಿನ ಬಾಂಧವ್ಯವನ್ನು ವೃದ್ಧಿಸಲು ಪ್ರತಿವರ್ಷ ಸ್ನೇಹಮಿಲನ ಕಾರ್ಯಕ್ರಮವನ್ನು ನಡೆಸುತ್ತದೆ. ಅದೊಂದು ಕುಟುಂಬದ ಶುಭಸಮಾರಂಭದಂತಿರುತ್ತದೆ. ಆ ವರ್ಷ ನಿವೃತ್ತರಾದವರು ಹಾಗೂ ಇತರ ಸಾಧನೆ ಮಾಡಿದವರನ್ನು ಸನ್ಮಾನಿಸುವುದಲ್ಲದೆ ಎಲ್ಲರಿಗೂ ಔತಣವನ್ನು ನೀಡಲಾಗುತ್ತದೆ. ದತ್ತಿ ಮತ್ತು ಪೋಷಕರ ನಡುವಿನ ಸಂಪರ್ಕ ಸೇತುವಾಗಿ ದತ್ತಿಯು 'ವಾಣಿ' ಎಂಬ ತ್ರೈಮಾಸಿಕ ಪತ್ರಿಕೆಯನ್ನು ಹೊರತರುತ್ತದೆ. ಪ್ರತಿ ಸಂಚಿಕೆಯ 20,000 ಪ್ರತಿಗಳು ಪೋಷಕರಿಗೆ ಉಚಿತವಾಗಿ ತಲುಪುತ್ತದೆ.

■ ಮುಂದುವರೆಯುವುದು

ಭಾನುವಾರ, ಆಗಸ್ 31, 2008
ಬೆಂಗಳೂರು ಟೈಮ್ಸ್, ದಿ ಟೈಮ್ಸ್ ಆಫ್ ಇಂಡಿಯಾ




ಮ್ಯಾನ್‌ಹಾಟನ್ ಅಸೋಸಿಯೇಟ್ಸ್ ಮತ್ತು ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಏರ್ಪಡಿಸಿದ್ದ ಸ್ವಯಂ ಪ್ರೇರಿತ ರಕ್ತದಾನ ಶಿಬಿರದಲ್ಲಿ ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ಪಿ.ಕೃಷ್ಣ, ಮ್ಯಾನ್‌ಹಾಟನ್ ಪ್ರಬಂಧಕ ಪ್ರಶಾಂತ್ ನಾಯಕ್ ಹಾಜರಿದ್ದರು.

ಸಂಜೆವಾಣಿ
ಶುಕ್ರವಾರ 29 ಆಗಸ್ಟ್ 2008




ಮ್ಯಾನ್‌ಹಟನ್ ಆಸೋಸಿಯೇಟ್ಸ್ ಮತ್ತು ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಬುಧವಾರ ಏರ್ಪಡಿಸಿದ್ದ ಸ್ವಯಂ ಪ್ರೇರಿತ ರಕ್ತದಾನ ಶಿಬಿರದಲ್ಲಿ ರಾಜ್ಯ ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ, ಗೌರವ ಖಜಾಂಚಿ ರಾಜು ಚಂದ್ರಶೇಖರ್, ಮ್ಯಾನ್ ಹಟನ್ ಪ್ರಬಂಧಕರಾದ ಪ್ರಶಾಂತ್ ನಾಯಕ್, ಸತೀಶ್ ಗೋವಿಂದನ್, ಸುಧಾಕರ್ ಮತ್ತಿತರರು ಹಾಜರಿದ್ದರು.

ಸಂಯುಕ್ತ ಕರ್ನಾಟಕ

# ನ್ಯಾನೋ ವಸ್ತು ತಯಾರಿಕೆಗೆ ಪ್ರೋತ್ಸಾಹ: ಸಿ.ಎನ್.ಆರ್. ರಾವ್ ಕರೆ

ಬೆಂಗಳೂರು, ಆ. 28– ನ್ಯಾನೋ ವಸ್ತುಗಳನ್ನು ಬೃಹತ್ ಪ್ರಮಾಣದಲ್ಲಿ ತಯಾರಿಸಲು ಸರ್ಕಾರ ಪ್ರೋತ್ಸಾಹಿಸಬೇಕೆಂದು ಖ್ಯಾತ ವಿಜ್ಞಾನಿ ಪ್ರೊ. ಸಿ.ಎನ್.ಆರ್. ರಾವ್ ಹೇಳಿದ್ದಾರೆ.

ಶೇಷಾದ್ರಿಪುರಂ ಪ್ರಥಮದರ್ಜೆ ಕಾಲೇಜು ಏರ್ಪಡಿಸಿದ್ದ ಮೂರು ದಿನಗಳ ರಾಷ್ಟ್ರಮಟ್ಟದ ನ್ಯಾನೋ ಬಯೋಟೆಕ್ನಾಲಜಿ ಕಾರ್ಯಾಗಾರವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ಸಣ್ಣ ವಸ್ತುಗಳ ಕುರಿತಾದ ಸಂಶೋಧನೆ ಭಾರತದ ಮುಂದಿನ ತಾಂತ್ರಿಕ ಅಭಿವೃದ್ಧಿಗೆ ನಾಂದಿ. ಭೌತಶಾಸ್ತ್ರ ರಸಾಯನಶಾಸ್ತ್ರ ಹಾಗೂ ಜೀವಶಾಸ್ತ್ರಗಳ ಆಡಿಪಾಯದ ಮೇಲೆ ಬೆಳೆಸಬಹುದಾದ ಬಯೋಟೆಕ್ನಾಲಜಿ ಕ್ಷೇತ್ರದಲ್ಲಿ ಯುವಕರಿಗೆ ಉಜ್ವಲ ಭವಿಷ್ಯವಿದೆ ಎಂದು ಅಭಿಪ್ರಾಯಪಟ್ಟರು.

ಮಾಹಿತಿ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಕಾರ್ಯದರ್ಶಿ ಅಶೋಕ್‌ಕುಮಾರ್ ಸಿ. ಮನೋಳಿ ಮಾತನಾಡಿ, ರಾಜ್ಯ ಸರ್ಕಾರ ಹೊಸ ತಾಂತ್ರಿಕ ಕ್ಷೇತ್ರಗಳಿಗೆ ಹೆಚ್ಚಿನ ಒತ್ತು ನೀಡಿದೆ. ವಿದ್ಯಾರ್ಥಿಗಳು ನ್ಯಾನೋ ಬಯೋಟೆಕ್ನಾಲಜಿ ಕ್ಷೇತ್ರದ ಅವಕಾಶಗಳನ್ನು ಸದುಪಯೋಗ ಪಡೆದುಕೊಳ್ಳಬೇಕೆಂದರು.

ಕಾರ್ಯಾಗಾರದಲ್ಲಿ ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಸಹ ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ, ಪ್ರಾಂಶುಪಾಲ ಡಾ. ಎಂ. ಪ್ರಕಾಶ್, ಪ್ರೊ. ಸಂತನು ದಾಸ್ ಮತ್ತು ಪ್ರೊ. ಸಲ್ಮಾಬಾನು ಉಪಸ್ಥಿತರಿದ್ದರು.



*ಬೆಂಗಳೂರಿನ ಶೇಷಾದ್ರಿಪುರಂ ಪ್ರಥಮದರ್ಜೆ ಕಾಲೇಜು ಏರ್ಪಡಿಸಿದ್ದ ರಾಷ್ಟ್ರಮಟ್ಟದ ನ್ಯಾನೋ ಬಯೋಟೆಕ್ನಾಲಜಿ ಕಾರ್ಯಾಗಾರವನ್ನು ಖ್ಯಾತ ವಿಜ್ಞಾನಿ ಪ್ರೊ. ಸಿ.ಎನ್.ಆರ್. ರಾವ್ ಉದ್ಘಾಟಿಸಿದರು.*

ರಾಜ್ಯಪ್ರಗತಿ

25-08-2008

### ರೋಟರಿ ಬೆಂಗಳೂರು ಜೆ.ಪಿ.ನಗರ

# ಜಗತ್ತು ಅಭಿವೃದ್ಧಿ ಪಥದಲ್ಲಿ ಸಾಗಿದ್ದರೂ ಶೇ. ೨೦ರಷ್ಟು ಜನ ಇನ್ನೂ ಅನಕ್ಷರಸ್ತರಾಗಿಯೇ ಇದ್ದಾರೆ.

**- ವೂಡೆ ಪಿ.ಕೃಷ್ಣ**



ವೂಡೆ ಪಿ.ಕೃಷ್ಣ

"ನಾಗಾಲೋಟದಲ್ಲಿ ಸಾಗುತ್ತಿರುವ ಜಗತ್ತಿನಲ್ಲಿ ಅನಕ್ಷರತೆ ಎನ್ನುವುದೊಂದು ಶಾಪ. ಆಧುನಿಕ ಜಗತ್ತು ದಿನೇ ದಿನೇ ಪವಾಡ ಸದೃಶ ರೀತಿಯಲ್ಲಿ ಅಭಿವೃದ್ಧಿ ಹೊಂದುತ್ತಾ ಸಾಗಿದ್ದರೂ, ಇನ್ನೂ ಶೇ. ೨೦ರಷ್ಟು ಜನ ಅನಕ್ಷರಸ್ತರಾಗಿಯೇ ಇದ್ದಾರೆ ಎನ್ನುವುದು ದುಃಖಕರ. ವಿದ್ಯಾವಂತರಿಗೆ ಸಮಾಜದಲ್ಲಿ ದೊರೆಯುವ ಗೌರವ ನಿರಕ್ಷರ ಕುಕ್ಷಿಗೆ ದೊರೆಯುವುದಿಲ್ಲ. ಭಾರತದಲ್ಲಿ ಸಾಕ್ಷರತೆ ವಿಷಯದಲ್ಲಿ ಶೇ.೧೦೦ರ ಸಾಧನೆ ಮಾಡಿರುವ ಕೇರಳ ರಾಜ್ಯದ ಬಗೆಗೆ ನಾವೆಲ್ಲರೂ ಹೆಮ್ಮೆ ಪಡಬೇಕು. ಸರ್ವಶಿಕ್ಷಾ ಅಭಿಯಾನಕ್ಕೆ ಭಾರತ ಸರ್ಕಾರ ಕೋಟ್ಯಾಂತರ ರೂಪಾಯಿಗಳನ್ನು ವ್ಯಯಿಸುತ್ತಿದೆ. ಎಲ್ಲಾ ತಂದೆ ತಾಯಿಯರಲ್ಲೂ ತಮ್ಮ ಮಕ್ಕಳು ಅಕ್ಷರಸ್ತರಾಗಬೇಕೆಂಬ ಭಾವನೆ ಬೆಳೆಯುತ್ತಿದೆ. ಇಂತಹ ಸಂದರ್ಭದಲ್ಲಿ Each one Teach one ಧ್ಯೇಯ ವಾಕ್ಯ ಅನುಸರಿಸಿ; ಒಬ್ಬ ಅವಿದ್ಯಾವಂತನನ್ನು ವಿದ್ಯಾವಂತನನ್ನಾಗಿ ಮಾಡುತ್ತೇವೆ ಎಂದು ಸಂಕಲ್ಪ ಮಾಡೋಣ. ಕೇಂದ್ರ ಸರ್ಕಾರ, ರಾಜ್ಯ ಸರ್ಕಾರಗಳ ಜೊತೆ ಕೈ ಜೊಡಿಸಿ, ೨೦೨೫ರೊಳಗೆ ಭಾರತದಲ್ಲಿ ಶೇ. ೧೦೦ರ ಸಾಕ್ಷರತೆ ಗುರಿ ಮುಟ್ಟೋಣ. ಹೈದರಾಬಾದ್ ಕರ್ನಾಟಕದ ಜಿಲ್ಲೆಗಳಲ್ಲಿ ಸಾಕ್ಷರತೆಯ ಪ್ರಮಾಣ ಬಹಳ ಕಡಿಮೆ ಇದೆ. ಸೇವಾ ಸಂಸ್ಥೆಗಳು ಈ ಜಿಲ್ಲೆಗಳತ್ತ ಗಮನ ಹರಿಸಬೇಕು" ಎಂದು ಹಿರಿಯ ಚಿಂತಕ, ಶೇಷಾದ್ರಿಪುರ ಶಿಕ್ಷಣ ಸಂಸ್ಥೆಗಳ ಪ್ರಧಾನ ಕಾರ್ಯದರ್ಶಿ ವೂಡೆ ಪಿ.ಕೃಷ್ಣ ಅವರು ಕರೆ ನೀಡಿದರು.

ಜೆ.ಪಿ.ನಗರದ ಆರ್.ವಿ. ಡೆಂಟಲ್ ಕಾಲೇಜ್ ಸಭಾಂಗಣದಲ್ಲಿ ೮-೮-೨೦೦೮ರ ಸಂಜೆ ರೋಟರಿ ಬೆಂಗಳೂರು ಜೆ.ಪಿ.ನಗರ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ವಾರದ ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದ ವೂಡೆ.ಪಿ.ಕೃಷ್ಣ ಅವರು ಉಪಾಧ್ಯಾಯ ಮತ್ತು ವಿದ್ಯಾರ್ಥಿಗಳು ಪಠ್ಯೇತರ ಚಟುವಟಿಕೆಗಳು ಮತ್ತು ಪಠ್ಯೇತರ ಸಾಹಿತ್ಯದತ್ತಲೂ ಒಲವು ತೋರಬೇಕೆಂದು ಕಿವಿ ಮಾತು ಹೇಳಿದರು. ಕನ್ನಡ ಭಾಷೆಯಲ್ಲಿ ಅ ಇಂದ ಅಃ ವರೆಗಿನ ಸ್ವರಗಳು ಚಿಕ್ಕ ಮಕ್ಕಳ ಅಳು, ನಗು ಮೊದಲಾದ ಶಬ್ದಗಳಿಂದಲೇ ರೂಪುಗೊಂಡಿವೆ. ಹೀಗಾಗಿ, ಕನ್ನಡವನ್ನು ನಿಜವಾಗಿಯೂ ಅದ್ಭುತ ಭಾಷೆ, ಪ್ರಾಕೃತಿಕ ಭಾಷೆ ಎನ್ನಬಹುದು. ಕನ್ನಡ ಮತ್ತು ಇತರ ದೇವನಾಗರಿ ಭಾಷೆಗಳು ವೈಜ್ಞಾನಿಕ ಭಾಷೆಗಳು ಎಂದು ಅಭಿಪ್ರಾಯಪಟ್ಟರು. ಮಾನವ ಸೇವೆಯನ್ನೇ ಧ್ಯೇಯವಾಗಿರಿಸಿಕೊಂಡು ವಿಶ್ವಾದ್ಯಂತ ದೊಡ್ಡ ಪ್ರಮಾಣದಲ್ಲಿ ಬೇರೂರಿರುವ ರೋಟರಿ ಸಂಸ್ಥೆಯ ಬಗೆಗೆ ಮೆಚ್ಚುಗೆ ವ್ಯಕ್ತಪಡಿಸಿದರು.

ಸಂಸ್ಥೆಯ ಅಧ್ಯಕ್ಷರಾದ ಸಿ.ಡಿ.ದೇವರಾಜ್ ಅವರ ಅಧ್ಯಕ್ಷತೆಯಲ್ಲಿ ನಡೆದ ಕಾರ್ಯಕ್ರಮ ವಿಶ್ವಶಾಂತಿಗಾಗಿ ಸಭೆ ೧ ನಿಮಿಷ ಮೌನ ಆಚರಿಸುವುದರೊಂದಿಗೆ ಆರಂಭವಾಯಿತು. ಎಚ್.ಬಿ.ಎಸ್. ಆರಾಧ್ಯ (ಬೆಂಗಳೂರು ಮಹಾನಗರ ಪಾಲಿಕೆಯ ನಿ.ಡೆಪ್ಯುಟಿ ಕಮಿಷನರ್) ಅವರು ಮುಖ್ಯ ಅತಿಥಿಯನ್ನು ಸಭೆಗೆ ಪರಿಚಯಿಸಿದರು. ಸಂಸ್ಥೆಯ ಕಾರ್ಯದರ್ಶಿ ಪಿ.ಎಚ್.ಎಫ್. ವೆಂಕಟ್‌ಹೊಳ್ಳ ಅವರ ವಂದನಾರ್ಪಣೆಯ ನಂತರ ರಾಷ್ಟ್ರಗೀತೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

ಸಂಯುಕ್ತ ಕರ್ನಾಟಕ

# ನ್ಯಾನೋ ವಸ್ತು ತಯಾರಿಕೆಗೆ ಪ್ರೋತ್ಸಾಹ: ಸಿ.ಎನ್.ಆರ್. ರಾವ್ ಕರೆ

ಬೆಂಗಳೂರು, ಆ. 28– ನ್ಯಾನೋ ವಸ್ತುಗಳನ್ನು ಬೃಹತ್ ಪ್ರಮಾಣದಲ್ಲಿ ತಯಾರಿಸಲು ಸರ್ಕಾರ ಪ್ರೋತ್ಸಾಹಿಸಬೇಕೆಂದು ಖ್ಯಾತ ವಿಜ್ಞಾನಿ ಪ್ರೊ. ಸಿ.ಎನ್.ಆರ್. ರಾವ್ ಹೇಳಿದ್ದಾರೆ.

ಶೇಷಾದ್ರಿಪುರಂ ಪ್ರಥಮದರ್ಜೆ ಕಾಲೇಜು ಏರ್ಪಡಿಸಿದ್ದ ಮೂರು ದಿನಗಳ ರಾಷ್ಟ್ರಮಟ್ಟದ ನ್ಯಾನೋ ಬಯೋಟೆಕ್ನಾಲಜಿ ಕಾರ್ಯಾಗಾರವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ಸಣ್ಣ ವಸ್ತುಗಳ ಕುರಿತಾದ ಸಂಶೋಧನೆ ಭಾರತದ ಮುಂದಿನ ತಾಂತ್ರಿಕ ಅಭಿವೃದ್ದಿಗೆ ನಾಂದಿ. ಭೌತಶಾಸ್ತ್ರ, ರಸಾಯನಶಾಸ್ತ್ರ ಹಾಗೂ ಜೀವಶಾಸ್ತ್ರಗಳ ಅಡಿಪಾಯದ ಮೇಲೆ ಬೆಳೆಸಬಹುದಾದ ಬಯೋಟೆಕ್ನಾಲಜಿ ಕ್ಷೇತ್ರದಲ್ಲಿ ಯುವಕರಿಗೆ ಉಜ್ವಲ ಭವಿಷ್ಯವಿದೆ ಎಂದು ಅಭಿಪ್ರಾಯಪಟ್ಟರು.

ಮಾಹಿತಿ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಕಾರ್ಯದರ್ಶಿ ಅಶೋಕ್‌ಕುಮಾರ್ ಸಿ. ಮನೋಳಿ ಮಾತನಾಡಿ, ರಾಜ್ಯ ಸರ್ಕಾರ ಹೊಸ ತಾಂತ್ರಿಕ ಕ್ಷೇತ್ರಗಳಿಗೆ ಹೆಚ್ಚಿನ ಒತ್ತು ನೀಡಿದೆ. ವಿದ್ಯಾರ್ಥಿಗಳು ನ್ಯಾನೋ ಬಯೋಟೆಕ್ನಾಲಜಿ ಕ್ಷೇತ್ರದ ಅವಕಾಶಗಳನ್ನು ಸದುಪಯೋಗ ಪಡೆದುಕೊಳ್ಳಬೇಕೆಂದರು..

ಕಾರ್ಯಾಗಾರದಲ್ಲಿ ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಸಹ ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ, ಪ್ರಾಂಶುಪಾಲ ಡಾ. ಎಂ. ಪ್ರಕಾಶ್, ಪ್ರೊ. ಸಂತನು ದಾಸ್ ಮತ್ತು ಪ್ರೊ. ಸಲ್ಮಾಬಾನು ಉಪಸ್ಥಿತರಿದ್ದರು.



*ಬೆಂಗಳೂರಿನ ಶೇಷಾದ್ರಿಪುರಂ ಪ್ರಥಮದರ್ಜೆ ಕಾಲೇಜು ಏರ್ಪಡಿಸಿದ್ದ ರಾಷ್ಟ್ರಮಟ್ಟದ ನ್ಯಾನೋ ಬಯೋಟೆಕ್ನಾಲಜಿ ಕಾರ್ಯಾಗಾರವನ್ನು ಖ್ಯಾತ ವಿಜ್ಞಾನಿ ಪ್ರೊ. ಸಿ.ಎನ್.ಆರ್. ರಾವ್ ಉದ್ಘಾಟಿಸಿದರು.*

ಸಂಜೆವಾಣಿ

ಮಂಗಳವಾರ 26 ಆಗಸ್ಟ್ 2008

# ನ್ಯಾನೋ ವಸ್ತುಗಳ ಉತ್ಪಾದನೆಗೆ ಉತ್ತೇಜನ ನೀಡಲು ಕರೆ

ಬೆಂಗಳೂರು, ಆ. ೨೬- ನ್ಯಾನೋ ವಸ್ತುಗಳನ್ನು ಬೃಹತ್ ಪ್ರಮಾಣದಲ್ಲಿ ಉತ್ಪಾದಿಸಲು ಸರ್ಕಾರವು ಪ್ರೋತ್ಸಾಹಿಸಬೇಕು ಎಂದು ವಿಜ್ಞಾನಿ ಡಾ. ಸಿ.ಎನ್.ಆರ್.ರಾವ್ ಸಲಹೆ ನೀಡಿದರು.

ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜು ಏರ್ಪಡಿಸಿದ್ದ ಮೂರು ದಿನಗಳ ನ್ಯಾನೋ ಬಯೋಟೆಕ್ನಾಲಜಿ ಕಾರ್ಯಾಗಾರವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ಸಣ್ಣ ವಸ್ತುಗಳ ಕುರಿತಾದ ಸಂಶೋಧನೆ ಭಾರತ ಮುಂದಿನ ತಾಂತ್ರಿಕ ಅಭಿವೃದ್ಧಿಗೆ ನಾಂದಿ ಹಾಡಲಿದೆ ಎಂದು ಹೇಳಿದರು.

ಭೌತಶಾಸ್ತ್ರ, ರಸಾಯನಶಾಸ್ತ್ರ, ಹಾಗೂ ಜೀವಶಾಸ್ತ್ರಗಳ ಅಡಿಪಾಯದ ಮೇಲೆ ಬೆಳೆಸಬಹುದಾದ ಬಯೋಟೆಕ್ನಾಲಜಿ ಕ್ಷೇತ್ರದಲ್ಲಿ ಯುವಕರಿಗೆ ಉಜ್ವಲ ಭವಿಷ್ಯವಿದೆ ಎಂದು ನುಡಿದರು.

ಐಟಿ ಮತ್ತು ಬಿಟಿ ಕಾರ್ಯದರ್ಶಿ ಅಶೋಕ್ ಕುಮಾರ್ ಸಿ. ಮನೋಲಿರವರು ಮಾತನಾಡಿ ವಿದ್ಯಾರ್ಥಿಗಳು ನ್ಯಾನೋ ಬಯೋಟೆಕ್ನಾಲಜಿ ಕ್ಷೇತ್ರದಲ್ಲಿರುವ ಅಪಾರ ಅವಕಾಶಗಳ ಕುರಿತು ವಿಚಾರ ವಿನಿಮಯ ಮಾಡಬೇಕೆಂದು ಸಲಹೆ ನೀಡಿದರು. ರಾಜ್ಯ ಸರ್ಕಾರವು ಹೊರಹೊಮ್ಮುತ್ತಿರುವ ಈ ಹೊಸ ತಾಂತ್ರಿಕ ಕ್ಷೇತ್ರಗಳಿಗೆ ಒತ್ತು ಕೊಡುತ್ತಿರುವುದಾಗಿ ಅವರು ತಿಳಿಸಿದರು. ಕಾರ್ಯಕ್ರಮದಲ್ಲಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಪ್ರಧಾನ ಕಾರ್ಯದರ್ಶಿ ವೊಡೇ ಪಿ. ಕೃಷ್ಣ, ಸಹ ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ, ಪ್ರಾಂಶುಪಾಲ ಡಾ. ಎಂ. ಪ್ರಕಾಶ್ ಮುಂತಾದವರು ಉಪಸ್ಥಿತರಿದ್ದರು.



ನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ ನಡೆದ ರಾಷ್ಟ್ರಮಟ್ಟದ ನ್ಯಾನೋ ಬಯೋಟೆಕ್ನಾಲಜಿ ಕಾರ್ಯಾಗಾರವನ್ನು ವಿಜ್ಞಾನಿ ಪ್ರೊ. ಸಿ.ಎನ್.ಆರ್. ರಾವ್ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಐಟಿ ಮತ್ತು ಬಿಟಿ ಕಾರ್ಯದರ್ಶಿ ಅಶೋಕ್‌ಕುಮಾರ್ ಸಿ. ಮನೋಲಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ ಪ್ರಧಾನ ಕಾರ್ಯದರ್ಶಿ ವೊಡೇ ಪಿ. ಕೃಷ್ಣ ಮುಂತಾದವರು ಉಪಸ್ಥಿತರಿದ್ದರು.

ಈ ಸಂಜೆ

ಮಂಗಳವಾರ 26 ಆಗಸ್ಟ್ 2008



ಭಗವಾನ್ ಮಹಾವೀರ್ ಜೈನ್ ಕಾಲೇಜ್ ಯುವ ರೆಡ್‌ಕ್ರಾಸ್ ಘಟಕವನ್ನು ರಾಜ್ಯ ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ವೂಡೇ ಪಿ.ಕೃಷ್ಣ ಉದ್ಘಾಟಿಸಿದರು. ಜೈನ್ ಸಮೂಹ ಸಂಸ್ಥೆಯಗಳ ನಿರ್ದೇಶಕಿ ಪ್ರೊ.ಕೆ.ಎಸ್. ಶಾಂತಾಮಣಿ, ಪ್ರಾಂಶುಪಾಲ ಡಾ.ಬಿ.ಟಿ.ವೆಂಕಟೇಶ್ ಇದ್ದರು.

26-8-2008 ಸಂಯುಕ್ತ ಕರ್ನಾಟಕ, ಬೆಂಗಳೂರು




ನಗರದ ಭಗವಾನ್ ಮಹಾವೀರ್ ಜೈನ್ ಕಾಲೇಜಿನ ಯುವ ರೆಡ್ ಕ್ರಾಸ್ ಘಟಕವನ್ನು ರಾಜ್ಯ ರೆಡ್‌ಕ್ರಾಸ್ ಸಂಸ್ಥೆಯ ಉಪಾಧ್ಯಕ್ಷ ವೊಡೇ ಪಿ. ಕೃಷ್ಣ ಶನಿವಾರ ಉದ್ಘಾಟಿಸಿದರು. ಜೈನ್ ಸಂಸ್ಥೆಗಳ ನಿರ್ದೇಶಕಿ ಪ್ರೊ. ಕೆ.ಎಸ್. ಶಾಂತಾಮಣಿ, ಪ್ರಾಂಶುಪಾಲರಾದ ಡಾ. ಬಿ.ಟಿ. ವೆಂಕಟೇಶ್ ಹಾಗೂ ಡಾ. ಎನ್.ಜಿ. ನಾರಾಯಣ ಉಪಸ್ಥಿತರಿದ್ದರು.

ವಿಜಯ ಕರ್ನಾಟಕ | ಸೋಮವಾರ, 25 ಆಗಸ್ಟ್ 2008

ವಿಕ ಚಿತ್ರಲೋಕ




ಭಗವಾನ್ ಮಹಾವೀರ್ ಜೈನ್ ಕಾಲೇಜಿನ ಯುವ ರೆಡ್‌ಕ್ರಾಸ್ ಘಟಕ ವನ್ನು ರಾಜ್ಯ ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ವೂಡಿ ಪಿ.ಕೃಷ್ಣ ಶನಿವಾರ ಉದ್ಘಾಟಿಸಿದರು. ಜೈನ್ ಸಮೂಹ ಸಂಸ್ಥೆಗಳ ನಿರ್ದೇಶಕಿ ಪ್ರೊ.ಕೆ.ಎಸ್. ಶಾಂತಾಮಣಿ, ಪ್ರಾಂಶುಪಾಲ ಡಾ.ಬಿ.ಟಿ. ವೆಂಕಟೇಶ್, ಡಾ. ಎನ್.ಜಿ.ನಾರಾಯಣ ಪಾಲ್ಗೊಂಡಿದ್ದರು.

ಪ್ರಜಾವಾಣಿ

ಭಾನುವಾರ 17ನೇ ಆಗಸ್ಟ್ 2008

# ‘ನ್ಯಾನೋ ಬಯೋಟೆಕ್’ ವಿಚಾರ ಸಂಕಿರಣ

ಬೆಂಗಳೂರು: 'ನ್ಯಾನೋ ಬಯೋಟೆಕ್ನಾಲಜಿ' ಕುರಿತ ರಾಷ್ಟ್ರ ಮಟ್ಟದ ಮೂರು ದಿನಗಳ ವಿಚಾರ ಸಂಕಿರಣ ಹಾಗೂ 'ಮಿರೇಜ್' ರಾಷ್ಟ್ರೀಯ ಉದ್ಯೋಗ ಮೇಳವನ್ನು ಇದೇ 25 ರಿಂದ 31ರವರೆಗೆ ಯಲಹಂಕದಲ್ಲಿರುವ ಶೇಷಾದ್ರಿಪುರದ ಪ್ರಥಮ ದರ್ಜೆ ಕಾಲೇಜಿನಲ್ಲಿ ಹಮ್ಮಿಕೊಳ್ಳಲಾಗಿದೆ.

ಹಾಗೂ ಸೆಪ್ಟೆಂಬರ್ 1 ಮತ್ತು 2ರಂದು ಇವುಗಳಿಗೆ ಸಂಬಂಧಿಸಿದ ಕಾರ್ಯಾಗಾರವನ್ನು ಸಹ ನಡೆಸಲಾಗುತ್ತಿದೆ ಎಂದು ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ವೂಡೆ ಪಿ. ಕೃಷ್ಣ ಶನಿವಾರ ಪತ್ರಿಕಾಗೋಷ್ಠಿಯಲ್ಲಿ ತಿಳಿಸಿದರು.

ಈ ಕಾರ್ಯಕ್ರಮವನ್ನು ಐಟಿ-ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ರಾಜ್ಯ ಸರ್ಕಾರ ಹಾಗೂ ಐ.ಸಿ.ಎಮ್.ಆರ್ ಸಹಭಾಗಿತ್ವದಲ್ಲಿ ನಡೆಸಲಾಗುತ್ತಿದೆ. 'ಮಿರೇಜ್' ರಾಷ್ಟ್ರೀಯ ಉದ್ಯೋಗ ಮೇಳದಲ್ಲಿ ಬಯೋಕಾನ್, ಮಿಲಿಪೋರ್, ಮಾನ್‌ಸೆಂಟೋ, ಇನ್ಫೋಸಿಸ್, ವಿಪ್ರೋ, ಟಿ.ಸಿ.ಎಸ್ ಮುಂತಾದ ಸಂಸ್ಥೆಗಳು ಪಾಲ್ಗೊಳ್ಳುತ್ತಿವೆ.

ಹಾಗೆಯೇ ವಿಜ್ಞಾನ ವಿದ್ಯಾರ್ಥಿಗಳು, ಉಪನ್ಯಾಸಕರು, ಎಂಜಿನಿಯರಿಂಗ್, ಐಟಿ, ಎಲೆಕ್ಟ್ರಾನಿಕ್ಸ್, ಕೃಷಿ ಅಲ್ಲದೆ ಬಿಎಸ್ಸಿ, ಎಂಎಸ್ಸಿ, ಬಿಇ ಪದವೀಧರರೂ ಭಾಗವಹಿಸಬಹುದಾಗಿದೆ.

ಕಾರ್ಯಾಗಾರವನ್ನು 'ಸ್ಟೆಮ್ ಸೆಲ್ಸ್ ಅ್ಯಂಡ್ ಇಟ್ಸ್ ಅಪ್ಲಿಕೇಶನ್ಸ್' ಎಂಬ ವಿಷಯದ ಮೇಲೆ ಏರ್ಪಡಿಸಲಾಗಿದೆ. ಇದರಲ್ಲಿ ಭಾಗವಹಿಸುವ ವಿದ್ಯಾರ್ಥಿಗಳಿಗೆ ರೂ.1500 ಮತ್ತು ಇತರರಿಗೆ ರೂ.2000 ಪ್ರವೇಶ ಧನ ನಿಗದಿಪಡಿಸಲಾಗಿದೆ.

'ಮಿರೇಜ್' ರಾಷ್ಟ್ರೀಯ ಉದ್ಯೋಗ ಮೇಳದಲ್ಲಿ ಭಾಗವಹಿಸುವ ವಿದ್ಯಾರ್ಥಿಗಳಿಗೆ ರೂ.250 ಮತ್ತು ಇತರರಿಗೆ ರೂ.350, ಸಿಂಪೋಸಿಯಂನಲ್ಲಿ ಪಾಲ್ಗೊಳ್ಳುವ ವಿದ್ಯಾರ್ಥಿಗಳಿಗೆ ರೂ.250 ಮತ್ತು ಇತರರಿಗೆ ರೂ.350 ಪ್ರವೇಶ ಧನ ನಿಗದಿ ಪಡಿಸಲಾಗಿದೆ ಎಂದರು. ಹೆಚ್ಚಿನ ವಿವರಗಳಿಗೆ :ಪ್ರೊ.ಸಂತಾನುದಾಸ್- 9886564873 ಪ್ರೊ.ಸಲ್ಮಾ ಬಾನು- 9886703351 ಸಂಪರ್ಕಿಸಬಹುದು.

ಬೆಂಗಳೂರು ಟೈಮ್ಸ್, ದಿ ಟೈಮ್ಸ್ ಆಫ್ ಇಂಡಿಯಾ ಭಾನುವಾರ, ಆಗಸ್ಟ್ 17, 2008



ಭಾರತೀಯ ರೆಡ್‌ಕ್ರಾಸ್ ಸಂಸ್ಥೆ, ಜಿನೀವಾ ಒಪ್ಪಂದ ದಿನಾಚರಣೆ ಅಂಗವಾಗಿ ಏರ್ಪಡಿಸಿದ್ದ ಜಾಥಾಗೆ ನಿ. ನ್ಯಾಯಮೂರ್ತಿ ಸದಾಶಿವ ಚಾಲನೆ ನೀಡಿದರು.

ಸಂಜೆ ವಾಣಿ ಭಾನುವಾರ 24 ಆಗಸ್ಟ್ 2008



ನಗರದ ಭಗವಾನ್ ಮಹಾವೀರ್ ಜೈನ್ ಕಾಲೇಜಿನ ಯುವ ರೆಡೆಕ್ರಾಸ್ ಘಟಕವನ್ನು ರಾಜ್ಯ ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ ಅವರು ನಿನ್ನೆ ಉದ್ಘಾಟಿಸಿದರು. ಜೈನ್ ಸಮೂಹ ಸಂಸ್ಥೆಗಳ ನಿರ್ದೇಶಕಿ ಪ್ರೊ. ಕೆ.ಎಸ್. ಶಾಂತಮಣಿ ಪ್ರಾಂಶುಪಾಲ ಡಾ.ಬಿ.ಟಿ. ವೆಂಕಟೇಶ್, ಡಾ. ಎನ್.ಜಿ. ನಾರಾಯಣ ಮತ್ತಿತರರು ಇದ್ದಾರೆ.

ಕನ್ನಡಪ್ರಭ, ಭಾನುವಾರ, 24 ಆಗಸ್ಟ್ 2008




## ರೆಡ್‌ಕ್ರಾಸ್ ಘಟಕ

ಮಹಾವೀರ್ ಜೈನ್ ಕಾಲೇಜಿನ ಯುವ ರೆಡ್‌ಕ್ರಾಸ್ ಘಟಕವನ್ನು ರಾಜ್ಯ ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ಪಿ.ಕೃಷ್ಣ ಉದ್ಘಾಟಿಸಿದರು. ಪ್ರೊ. ಕೆ.ಎಸ್. ಶಾಂತಾಮಣಿ, ಪ್ರಾಂಶುಪಾಲ ಡಾ. ಬಿ.ಟಿ.ವೆಂಕಟೇಶ್ ಹಾಗೂ ಡಾ. ಎಂ.ಜಿ.ನಾರಾಯಣ ಇದ್ದರು.

ಭಾನುವಾರ 17 ಆಗಸ್ಟ್ 2008 | 3 | UDAYAVANI - BANGALORE ಉದಯವಾಣಿ

# ನ್ಯಾನೋ ಬಯೋಟೆಕ್ನಾಲಜಿ ಬಗ್ಗೆ ರಾಷ್ಟ್ರೀಯ ವಿಚಾರ ಸಂಕಿರಣ

ಬೆಂಗಳೂರು, ಆ. 16: ನ್ಯಾನೋ ಬಯೋಟೆಕ್ನಾಲಜಿ ಕುರಿತ ಮೂರು ದಿನಗಳ ರಾಷ್ಟ್ರೀಯ ವಿಚಾರ ಸಂಕಿರಣ ಆ. 25 ರಿಂದ ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ ನಡೆಯಲಿದೆ.

ಇಂದಿಲ್ಲಿ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಸಂಕಿರಣವನ್ನು ಹೆಸರಾಂತ ವಿಜ್ಞಾನಿ ಡಾ। ಸಿ.ಎನ್.ಆರ್. ರಾವ್ ಉದ್ಘಾಟಿಲಿದ್ದು, ಐಟಿ, ಬಿಟಿ ಇಲಾಖೆ ಕಾರ್ಯದರ್ಶಿ ಅಶೋಕ್‌ಕುಮಾರ್ ಮನೋಲಿ ಪಾಲ್ಗೊಳ್ಳ ಲಿದ್ದಾರೆಂದರು. ಸಂಪನ್ಮೂಲ ವ್ಯಕ್ತಿಗಳಾಗಿ ಶಂತನು ಭಟ್ಟಾಚಾರ್ಯ, ಕೃಷ್ಣ ಗಣೇಶ್, ಟಾಟಾ ನರಸಿಂಗರಾವ್, ಜಿ.ಯು. ಕುಲಕರ್ಣಿ, ಆದಿತ್ಯ ಮಿತ್ತಲ್, ಎಸ್. ಸಂಪತ್ ಮೊದಲಾದವರು ಭಾಗವಹಿಸ ಲಿದ್ದಾರೆಂದರು.

**ಉದ್ಯೋಗ ಮೇಳ:** ಆ. 29 ರಿಂದ ಮೂರು ದಿನಗಳ ಕಾಲ ಮಿರೇಜ್ ರಾಷ್ಟ್ರೀಯ ಉದ್ಯೋಗ ಸಮ್ಮೇಳನವನ್ನು ಸಂಸ್ಥೆಯ ಆವರಣದಲ್ಲಿ ಆಯೋಜಿಸ ಲಾಗಿದೆ. ಬಯೋಕಾನ್, ವಿಪ್ರೋ, ಇನ್ಫೋಸಿಸ್, ಟಿಸಿಎಸ್, ಮಾನ್ಸಾಂಟೋ, ಮಿಲ್ಲಿಪೋರ್, ಯಶ್ ನಾನೋಟೆಕ್, ರೇ ಕೆಮಿಕಲ್ಸ್, ಐಬಿಎಬಿ, ಭಟ್ ಬಯೋಟೆಕ್ ಸಂಸ್ಥೆಗಳು ಇದರಲ್ಲಿ ಭಾಗವಹಿಸಲಿವೆ ಎಂದು ಹೇಳಿದರು.

ಉದ್ಯೋಗಾಕಾಂಕ್ಷಿಗಳು ತಮ್ಮ ಅರ್ಜಿ ಹಾಗೂ ವೈಯಕ್ತಿಕ ವಿವರಗಳನ್ನು mirajofair@yahoo.co.in, mirajofair.gmail.co ಇಮೇಲ್‌ಗೆ ಕಳುಹಿಸಬಹುದೆಂದರು.

**ಕಾರ್ಯಾಗಾರ:** ಸೆಪ್ಟೆಂಬರ್ 1 ಹಾಗೂ 2 ರಂದು ಸ್ಟೆಮ್ ಸೆಲ್ ಹಾಗೂ ಅಪಾಪ್ಟೋಸಿಸ್ ಕುರಿತ ಕಾರ್ಯಾಗಾರವನ್ನು ಆಯೋಜಿಸಲಾಗಿದೆ. ಸ್ಟೆಮ್ ಸೆಲ್ ಕುರಿತ ಸ್ಪರ್ಧೆ, ಪ್ರಬಂಧ ಮಂಡನೆ, ಕೊಲಾಜ್, ಮಾಡೆಲ್ ಪ್ರದರ್ಶನಕ್ಕೆ ಇದರಲ್ಲಿ ಅವಕಾಶವಿದೆ. ತಲಾ 20 ಮಂದಿಯ ತಂಡದಲ್ಲಿ ಪಾಲ್ಗೊಳ್ಳಲು ಅವಕಾಶವಿದ್ದು ಆಸಕ್ತರು ಹೆಸರು ನೋಂದಾಯಿಸಬಹುದೆಂದರು.

ಪತ್ರಿಕಾಗೋಷ್ಠಿಯಲ್ಲಿ ಪ್ರೊ. ಪಿ. ಕೃಷ್ಣ, ಡಾ। ಎಂ. ಪ್ರಕಾಶ್, ಪ್ರೊ। ಸಂತಾನು ದಾಸ್, ಪ್ರೊ। ಸಲ್ಮಾ ಬಾನು ಹಾಜರಿದ್ದರು.

ವಿಜಯ ಕರ್ನಾಟಕ | ಶನಿವಾರ, 16 ಆಗಸ್ಟ್ 2008 | ಬೆಂಗಳೂರು



# ಜನ ಜಾಗೃತಿಯೇ ಸಮಾಜಸೇವೆ

ವಿಕ ಸುದ್ದಿಲೋಕ

ಬೆಂಗಳೂರು: ನಿಮ್ಮ ಜ್ಞಾನದ ನೂರನೇ ಒಂದು ಭಾಗವನ್ನು ಇತರರಲ್ಲಿ ಜಾಗೃತಿ ಮೂಡಿಸಲು ವಿನಿಯೋಗಿಸಿ. ಅದೇ ಸಮಾಜ ಸೇವೆ ಎಂದು ನಿವೃತ್ತ ನ್ಯಾಯಮೂರ್ತಿ ಎ.ಜೆ.ಸದಾಶಿವ ಅಭಿಪ್ರಾಯಪಟ್ಟರು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯು, ಜಿನೆವಾ ಒಪ್ಪಂದ ದಿನಾಚರಣೆ ಅಂಗವಾಗಿ ನಗರದಲ್ಲಿ ಮಂಗಳವಾರ ಆಯೋಜಿಸಿದ್ದ ಜನ ಜಾಗೃತಿ ಜಾಥಾಕ್ಕೆ ಮಂಗಳವಾರ ಚಾಲನೆ ನೀಡಿ ಮಾತನಾಡಿದರು.

ಜನಸೇವೆಯ ಉದಾತ್ತ ಧ್ಯೇಯದೊಂದಿಗೆ ಹೆನ್ರಿ ಡ್ಯುರಾಂಟ್ ರೆಡ್‌ಕ್ರಾಸ್ ಸ್ಥಾಪಿಸಿದರು. ಯುದ್ಧಕಾಲದಲ್ಲಿ ಗಾಯಾಳುಗಳ ಶುಶ್ರೂಷೆಗೆ ಜನಸಾಮಾನ್ಯರ ನೆರವು ಪಡೆದರು ಎಂದು ನುಡಿದರು.

ಹಿಂದಿನ ಕಾಲದಲ್ಲಿ ಯುದ್ಧಗಳು ನೇರವಾಗಿ ನಡೆಯುತ್ತಿದ್ದವು. ಆದರೆ, ಇಂದಿನ ಕಾಲದಲ್ಲಿ ಗಾಳಿ, ನೀರು ಹಾಗೂ ಆಹಾರ ಬೆಳೆಗಳನ್ನು ವಿಷಮಯಗೊಳಿಸುವ ಮೂಲಕ ಪರೋಕ್ಷ ಸಮರ ನಡೆಸಲಾಗುತ್ತಿದೆ. ಅದನ್ನು ತಡೆಯಬೇಕಾದುದು ಯುವಜನತೆಯ ಕರ್ತವ್ಯ ಎಂದರು.

ವಿಕ ಚಿತ್ರಲೋಕ




ಜಿನೆವಾ ಒಪ್ಪಂದ ದಿನಾಚರಣೆ ಅಂಗವಾಗಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಮಂಗಳವಾರ ಆಯೋಜಿಸಿದ್ದ ಜನ ಜಾಗೃತಿ ಜಾಥಾದಲ್ಲಿ ನಿವೃತ್ತ ನ್ಯಾಯಮೂರ್ತಿ ಎ.ಜೆ.ಸದಾಶಿವ, ವೂಡೇ ಪಿ.ಕೃಷ್ಣ, ರಾಜು ಚಂದ್ರಶೇಖರ್ ಪಾಲ್ಗೊಂಡಿದ್ದರು.

ರೆಡ್ ಕ್ರಾಸ್ ಸಂಸ್ಥೆ ಯುವಕರಿಂದ ಹೆಚ್ಚಿನ ಸೇವೆ ನಿರೀಕ್ಷಿಸುತ್ತಿದೆ ಎಂದು ರೆಡ್ ಕ್ರಾಸ್‌ನ ರಾಜ್ಯ ಶಾಖೆಯ ಉಪಾಧ್ಯಕ್ಷ ವೂಡೇ ಪಿ.ಕೃಷ್ಣ ನುಡಿದರು.

ಗೌರವ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ.ಎನ್.ಜಿ.ನಾರಾಯಣ ಮತ್ತಿತರರು ಪಾಲ್ಗೊಂಡಿದ್ದರು. ಜನ ಜಾಗೃತಿ ಜಾಥಾದಲ್ಲಿ ನಾನಾ ಕಾಲೇಜುಗಳ 300ಕ್ಕೂ ಹೆಚ್ಚು ವಿದ್ಯಾರ್ಥಿಗಳು ಭಾಗವಹಿಸಿದ್ದರು.

ಸಂಯುಕ್ತ ಕರ್ನಾಟಕ 14-8-2008




ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಜಿನೀವಾ ಒಪ್ಪಂದ ದಿನಾಚರಣೆ ಅಂಗವಾಗಿ ಬೆಂಗಳೂರಿನಲ್ಲಿ ಏರ್ಪಡಿಸಿದ್ದ ಜಾಥಾಗೆ ನಿವೃತ್ತ ನ್ಯಾಯಮೂರ್ತಿ ಎ.ಜೆ. ಸದಾಶಿವ ಚಾಲನೆ ನೀಡಿದರು. ರೆಡ್‌ಕ್ರಾಸ್ ರಾಜ್ಯ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ ಖಜಾಂಚಿ ರಾಜು ಚಂದ್ರಶೇಖರ್ ಜಾಥಾದ ನೇತೃತ್ವ ವಹಿಸಿದ್ದರು.

ಬೆಂಗಳೂರು

ಗುರುವಾರ, 14 ಆಗಸ್ಟ್ 2008

ವಿಜಯ

# ಗುಣಾತ್ಮಕ ಶಿಕ್ಷಣಕ್ಕೆ ಒತ್ತು ನೀಡಲು ತಿಮ್ಮಪ್ಪ ಕರೆ

ಬೆಂಗಳೂರು: ಗುಣಾತ್ಮಕ ಶಿಕ್ಷಣ ಇಂದಿನ ಅವಶ್ಯಕತೆಯಾಗಿದೆ ಎಂದು ಬೆಂಗಳೂರು ವಿವಿ ನಿವೃತ್ತ ಕುಲಪತಿ ಡಾ. ಎಂ.ಎಸ್. ತಿಮ್ಮಪ್ಪ ಅಭಿಪ್ರಾಯಪಟ್ಟರು.

ಶೇಷಾದ್ರಿಪುರಂ ಬಾಲಕರ ಪ್ರೌಢಶಾಲೆ ಏರ್ಪಡಿಸಿದ್ದ 'ಶಿಕ್ಷಕರ ಅಭಿವೃದ್ಧಿ ಯೋಜನೆ'ಯ ಸಮಾರಂಭ ಉದ್ಘಾಟಿಸಿ ಅವರು ಮಾತನಾಡಿದರು.

ತಾಂತ್ರಿಕತೆಯು ತರಗತಿಯ ಶಿಕ್ಷಕನ ಸ್ಥಾನವನ್ನು ಸರಿಗಟ್ಟುವುದಿಲ್ಲ. ಸೆಮಿಸ್ಟರ್ ಪದ್ಧತಿಯ ಶಿಕ್ಷಣದಲ್ಲಿ ವಿಷಯದ ದೃಢೀಕರಣ ಮತ್ತು ಕಲಿಕೆಯ ಫಲ ಕಾಲಾನುಕಾಲಕ್ಕೆ ಅರಿವು ಮೂಡಿಸುತ್ತಿರಬೇಕು. ಪ್ರೋಗ್ರಾಮ್ಡ್ ಲರ್ನಿಂಗ್‌ನಲ್ಲಿ ವಿಷಯದ ಅರಿವಿನ ಸ್ಪಷ್ಟತೆ ಮತ್ತು ಅವುಗಳನ್ನು ನೆನಪಿನಲ್ಲಿಟ್ಟುಕೊಳ್ಳುವುದು ಉದ್ದೇಶವಾಗಿರುತ್ತದೆ. ಇಲ್ಲದಿದ್ದರೆ ಈ ವಿಧಾನದ ಕಲಿಕೆಯು ಯಶಸ್ಸನ್ನು ತಲುಪುವುದಿಲ್ಲ ಎಂದರು.

ಶಿಕ್ಷಕ ವಿದ್ಯಾರ್ಥಿಗೆ ವಿಷಯದ ವರ್ಗಾವಣೆ ಮಾಡುವುದು, ವಿದ್ಯಾರ್ಥಿಯೊಂದಿಗೆ ವ್ಯವಹರಿಸುವುದು ಮತ್ತು ವಿದ್ಯಾರ್ಥಿಯಲ್ಲಿ ಪರಿವರ್ತನೆಯನ್ನುಂಟು ಮಾಡುವುದು. ಈ ಮೂರು ಅಂಶಗಳನ್ನು ಪ್ರತಿಯೊಬ್ಬ ಶಿಕ್ಷಕನೂ ಗಮನದಲ್ಲಿಟ್ಟು ಕೊಳ್ಳಬೇಕು ಎಂದು ಹೇಳಿದರು.

ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಮಾತನಾಡಿ, ಅನುಭವವಿಲ್ಲದ ವಿದ್ಯೆಯು ನಿಶ್ಪ್ರಯೋಜಕ ಎಂದು ಹೇಳಿದರು.

ಅಧ್ಯಕ್ಷತೆ ವಹಿಸಿದ್ದ ಶಿಕ್ಷಣ ದತ್ತಿ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ ಮಾತನಾಡಿ, ಪ್ರತಿಯೊಬ್ಬ ಶಿಕ್ಷಕ ತನ್ನ ಅಹಂಭಾವವನ್ನು ಬದಿಗೊತ್ತಿ ಕರ್ತವ್ಯನಿಷ್ಠೆಯನ್ನು ಬೆಳೆಸಿಕೊಳ್ಳಬೇಕು ಮತ್ತು ಪ್ರತಿಯೊಂದು ಮಗುವೂ ತನ್ನದೇ ಆದ ಸ್ವಂತಿಕೆ ಹೊಂದಿರುವ ಕಾರಣ ಅದರ ಪ್ರತಿಭೆಯನ್ನು ಗುರುತಿಸಬೇಕು ಎಂದು ತಿಳಿಸಿದರು. ಶಾಲೆಯ ಸಂಗೀತ ಶಿಕ್ಷಕಿ ಕೆ.ಆರ್. ಗೀತಾ ಪ್ರಾರ್ಥಿಸಿದರು. ಮುಖ್ಯೋಪಾಧ್ಯಾಯಿನಿ ವಿನಯಾ ಸುವರ್ಣ ಸ್ವಾಗತಿಸಿದರು. ವೇದಾವತಿ ವಂದಿಸಿದರು.



ಶೇಷಾದ್ರಿಪುರಂ ಬಾಲಕರ ಪ್ರೌಢಶಾಲೆ ಏರ್ಪಡಿಸಿದ್ದ 'ಶಿಕ್ಷಕರ ಅಭಿವೃದ್ಧಿ ಯೋಜನೆ' ಸಮಾರಂಭವನ್ನು ಡಾ. ಎಂ.ಎಸ್. ತಿಮ್ಮಪ್ಪ ಉದ್ಘಾಟಿಸಿದರು. ವೂಡೇ ಪಿ. ಕೃಷ್ಣ ಮತ್ತು ಎನ್.ಆರ್. ಪಂಡಿತಾರಾಧ್ಯ ಉಪಸ್ಥಿತರಿದ್ದರು.

# ಗುಣಾತ್ಮಕ ಶಿಕ್ಷಣಕ್ಕೆ ಒತ್ತು ನೀಡಲು ತಿಮ್ಮಪ್ಪ ಕರೆ

ಬೆಂಗಳೂರು: ಗುಣಾತ್ಮಕ ಶಿಕ್ಷಣ ಇಂದಿನ ಅವಶ್ಯಕತೆಯಾಗಿದೆ ಎಂದು ಬೆಂಗಳೂರು ವಿವಿ ನಿವೃತ್ತ ಕುಲಪತಿ ಡಾ. ಎಂ.ಎಸ್. ತಿಮ್ಮಪ್ಪ ಅಭಿಪ್ರಾಯಪಟ್ಟರು.

ಶೇಷಾದ್ರಿಪುರಂ ಬಾಲಕರ ಪ್ರೌಢಶಾಲೆ ಏರ್ಪಡಿಸಿದ್ದ 'ಶಿಕ್ಷಕರ ಅಭಿವೃದ್ಧಿ ಯೋಜನೆ'ಯ ಸಮಾರಂಭ ಉದ್ಘಾಟಿಸಿ ಅವರು ಮಾತನಾಡಿದರು.

ತಾಂತ್ರಿಕತೆಯು ತರಗತಿಯ ಶಿಕ್ಷಕನ ಸ್ಥಾನವನ್ನು ಸಮಗಟ್ಟುವುದಿಲ್ಲ. ಸೆಮಿಸ್ಟರ್ ಪದ್ಧತಿಯ ಶಿಕ್ಷಣದಲ್ಲಿ ವಿಷಯದ ದೃಢೀಕರಣ ಮತ್ತು ಕಲಿಕೆಯ ಫಲ ಕಾಲಾನುಕಾಲಕ್ಕೆ ಅರಿವು ಮೂಡಿಸುತ್ತಿರಬೇಕು. ಪ್ರೋಗ್ರಾಮ್ಡ್ ಲರ್ನಿಂಗ್‌ನಲ್ಲಿ ವಿಷಯದ ಅರಿವಿನ ಸ್ಪಷ್ಟತೆ ಮತ್ತು ಅವುಗಳನ್ನು ನೆನಪಿನಲ್ಲಿಟ್ಟುಕೊಳ್ಳುವುದು ಉದ್ದೇಶವಾಗಿರುತ್ತದೆ. ಇಲ್ಲದಿದ್ದರೆ ಈ ವಿಧಾನದ ಕಲಿಕೆಯು ಯಶಸ್ಸನ್ನು ತಲುಪುವುದಿಲ್ಲ ಎಂದರು.

ಶಿಕ್ಷಕ ವಿದ್ಯಾರ್ಥಿಗೆ ವಿಷಯದ ವರ್ಗಾವಣೆ ಮಾಡುವುದು, ವಿದ್ಯಾರ್ಥಿಯೊಂದಿಗೆ ವ್ಯವಹರಿಸುವುದು ಮತ್ತು ವಿದ್ಯಾರ್ಥಿಯಲ್ಲಿ ಪರಿವರ್ತನೆಯನ್ನುಂಟು ಮಾಡುವುದು. ಈ ಮೂರು ಅಂಶಗಳನ್ನು ಪ್ರತಿಯೊಬ್ಬ ಶಿಕ್ಷಕನೂ ಗಮನದಲ್ಲಿಟ್ಟು ಕೊಳ್ಳಬೇಕು ಎಂದು ಹೇಳಿದರು.

ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಮಾತನಾಡಿ, ಅನುಭವವಿಲ್ಲದ ವಿದ್ಯೆಯು ನಿಷ್ಪ್ರಯೋಜಕ ಎಂದು ಹೇಳಿದರು.

ಅಧ್ಯಕ್ಷತೆ ವಹಿಸಿದ್ದ ಶಿಕ್ಷಣ ದತ್ತಿ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ ಮಾತನಾಡಿ, ಪ್ರತಿಯೊಬ್ಬ ಶಿಕ್ಷಕ ತನ್ನ ಅಹಂಭಾವವನ್ನು ಬದಿಗೊತ್ತಿ ಕರ್ತವ್ಯನಿಷ್ಠೆಯನ್ನು ಬೆಳೆಸಿಕೊಳ್ಳಬೇಕು ಮತ್ತು ಪ್ರತಿಯೊಂದು ಮಗುವೂ ತನ್ನದೇ ಆದ ಸ್ವಂತಿಕೆ ಹೊಂದಿರುವ ಕಾರಣ ಅದರ ಪ್ರತಿಭೆಯನ್ನು ಗುರುತಿಸಬೇಕು ಎಂದು ತಿಳಿಸಿದರು. ಶಾಲೆಯ ಸಂಗೀತ ಶಿಕ್ಷಕಿ ಕೆ.ಆರ್. ಗೀತಾ ಪ್ರಾರ್ಥಿಸಿದರು. ಮುಖ್ಯೋಪಾಧ್ಯಾಯಿನಿ ವಿನಯಾ ಸುವರ್ಣ ಸ್ವಾಗತಿಸಿದರು. ವೇದಾವತಿ ವಂದಿಸಿದರು.



**ಶೇಷಾದ್ರಿಪುರಂ ಬಾಲಕರ ಪ್ರೌಢಶಾಲೆ ಏರ್ಪಡಿಸಿದ್ದ 'ಶಿಕ್ಷಕರ ಅಭಿವೃದ್ಧಿ ಯೋಜನೆ'ಸಮಾರಂಭವನ್ನು ಡಾ. ಎಂ.ಎಸ್. ತಿಮ್ಮಪ್ಪ ಉದ್ಘಾಟಿಸಿದರು. ವೂಡೇ ಪಿ. ಕೃಷ್ಣ ಮತ್ತು ಎನ್.ಆರ್. ಪಂಡಿತಾರಾಧ್ಯ ಉಪಸ್ಥಿತರಿದ್ದರು.**

ಸಂಜೆವಾಣಿ
ಬುಧವಾರ 13 ಆಗಸ್ಟ್ 2008

ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ನಗರದಲ್ಲಿ ಜಿನೀವಾ ಒಪ್ಪಂದ ದಿನಾಚರಣೆ ಅಂಗವಾಗಿ ರೆಡ್‌ಕ್ರಾಸ್ ಸ್ಥಾಪಕ ಜೀನ್ ಹೆನ್ರಿ ಡ್ಯುನಾ ಅವರ ಪ್ರತಿಮೆಗೆ ನಿವೃತ್ತ ನ್ಯಾಯಮೂರ್ತಿ ಎ.ಜಿ. ಸದಾಶಿವ ಮಾಲಾರ್ಪಣೆ ಮಾಡಿದರು. ರೆಡ್‌ಕ್ರಾಸ್ ರಾಜ್ಯ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ, ಗೌರವ ಖಜಾಂಚಿ ರಾಜು ಚಂದ್ರಶೇಖರ್ ಹಾಗೂ ಇತರರು ಹಾಜರಿದ್ದರು.



ಈ ಸಂಜೆ

ಮಂಗಳವಾರ, 12 ಆಗಸ್ಟ್ 2008




ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಏರ್ಪಡಿಸಿದ್ದ ಜಿನೀವಾ ಒಪ್ಪಂದ ದಿನಾಚರಣೆಗೆ ನಿವೃತ್ತ ನ್ಯಾಯಮೂರ್ತಿ ಎ.ಜೆ.ಸದಾಶಿವ ಚಾಲನೆ ನೀಡಿದರು. ಈ ಸಂದರ್ಭದಲ್ಲಿ ವೊಡೆ ಪಿ ಕೃಷ್ಣ, ರಾಜುಚಂದ್ರ ಶೇಖರ್ ಮತ್ತಿತರರು ಉಪಸ್ಥಿತರಿದ್ದರು.

ಪ್ರಜಾವಾಣಿ

ಮಂಗಳವಾರ
12ನೇ ಆಗಸ್ಟ್ 2008




ಬೆಂಗಳೂರಿನ ಶಿಕ್ಷಣ ದತ್ತಿಯ ವತಿಯಿಂದ ಸೋಮವಾರ ಆಯೋಜಿಸಲಾಗಿದ್ದ 'ಶಿಕ್ಷಕರ ಅಭಿವೃದ್ಧಿ-2008' ಕಾರ್ಯಕ್ರಮವನ್ನು ಬೆಂಗಳೂರು ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಪ್ರೊ. ಎಂ.ಎಸ್.ತಿಮ್ಮಪ್ಪ ಉದ್ಘಾಟಿಸಿದರು. ಶೇಷಾದ್ರಿಪುರ ಬಾಲಕರ ಪ್ರೌಢಶಾಲೆಯ ಮುಖ್ಯೋಪಾಧ್ಯಾಯಿನಿ ವೇದಾವತಿ, ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ.ಕೃಷ್ಣ, ಅಧ್ಯಕ್ಷ ಎನ್.ಆರ್.ಪಂಡಿತ ಆರಾಧ್ಯ ಚಿತ್ರದಲ್ಲಿದ್ದಾರೆ.

# ಗುಣಾತ್ಮಕ ಶಿಕ್ಷಣ ನೀಡಿರಿ: ತಿಮ್ಮಪ್ಪ

**ಪ್ರಜಾವಾಣಿ ವಾರ್ತೆ**

**ಬೆಂಗಳೂರು:** 'ಆಧುನಿಕ ಯುಗದಲ್ಲಿ ಮಕ್ಕಳಿಗೆ ಗುಣಾತ್ಮಕ ಶಿಕ್ಷಣ ನೀಡುವುದು ಅಗತ್ಯವಾಗಿದೆ. ಸೆಮಿಸ್ಟರ್ ಪದ್ಧತಿ ಶಿಕ್ಷಣದಲ್ಲಿ ವಿಷಯದ ದೃಢೀಕರಣ ಹಾಗೂ ಕಲಿಕೆಯ ಫಲ ಕಾಲಾನುಕಾಲಕ್ಕೆ ಅರಿವು ಮೂಡಿಸುತ್ತಿರಬೇಕು' ಎಂದು ಬೆಂಗಳೂರು ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಎಂ.ಎಸ್.ತಿಮ್ಮಪ್ಪ ಇಲ್ಲಿ ಅಭಿಪ್ರಾಯಪಟ್ಟರು.

ನಗರದ ಶೇಷಾದ್ರಿಪುರ ಶಿಕ್ಷಣ ದತ್ತಿ ವತಿಯಿಂದ ಸೋಮವಾರ ಆಯೋಜಿಸಲಾಗಿದ್ದ 'ಶಿಕ್ಷಕರ ಅಭಿವೃದ್ಧಿ -2008' ಕಾರ್ಯಕ್ರಮ ಉದ್ಘಾಟಿಸಿ ಅವರು ಮಾತನಾಡಿದರು.

'ಶಿಕ್ಷಕನು ಮಗುವಿಗೆ ವಿಷಯದ ವರ್ಗಾವಣೆ ಮಾಡುವುದು, ಮಗುವಿನೊಡನೆ ವ್ಯವಹರಿಸುವುದು ಮತ್ತು ಮಗುವಿನಲ್ಲಿ ಪರಿವರ್ತನೆ ಉಂಟು ಮಾಡುವುದು– ಈ ಮೂರು ಅಂಶಗಳನ್ನು ಪ್ರತಿಯೊಬ್ಬ ಶಿಕ್ಷಕನು ಗಮನದಲ್ಲಿ ಇಟ್ಟುಕೊಳ್ಳಬೇಕು' ಎಂದು ಕಿವಿಮಾತು ಹೇಳಿದರು.ಶಿಕ್ಷಣ ದತ್ತಿಯ ಅಧ್ಯಕ್ಷ ಎನ್.ಆರ್.ಪಂಡಿತ ಆರಾಧ್ಯ ಅಧ್ಯಕ್ಷತೆ ವಹಿಸಿ ಮಾತನಾಡಿ, 'ಪ್ರತಿಯೊಬ್ಬ ಶಿಕ್ಷಕನು ತನ್ನ ಸ್ವ- ಹಿತಾಸಕ್ತಿ ಬದಿಗೊತ್ತಿ ಕರ್ತವ್ಯ ಪ್ರಜ್ಞೆ ಬೆಳೆಸಿಕೊಳ್ಳಬೇಕು. ಪ್ರತಿಯೊಂದು ಮಗುವು ತನ್ನದೇ ಆದ ಸ್ವಂತಿಕೆ ಹೊಂದಿರುವ ಕಾರಣ ಅದರ ಪ್ರತಿಭೆ ಗುರುತಿಸಿ ಗೌರವಿಸಬೇಕು' ಎಂದರು.

ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ.ಕೃಷ್ಣ ಮಾತನಾಡಿದರು. ಶೇಷಾದ್ರಿಪುರ ಬಾಲಕರ ಪ್ರೌಢಶಾಲೆಯ ಮುಖ್ಯೋಪಾಧ್ಯಾಯಿನಿ ವೇದಾವತಿ ವಂದಿಸಿದರು.

ಕನ್ನಡಪ್ರಭ, ಮಂಗಳವಾರ, 12 ಆಗಸ್ಟ್ 2008

## ಕಾನೂನು ಶಿಬಿರ



ಶೇಷಾದ್ರಿಪುರ ಬಾಲಕರ ಪ್ರೌಢಶಾಲೆಯಲ್ಲಿ ಏರ್ಪಡಿಸಿದ್ದ ಶಿಕ್ಷಕರ ಅಭಿವೃದ್ಧಿಯ ಕಾರ್ಯಕ್ರಮವನ್ನು ವಿಶ್ರಾಂತ ಕುಲಪತಿ ಡಾ।ಎಂ.ಎಸ್. ತಿಮ್ಮಪ್ಪ ಉದ್ಘಾಟಿಸಿದರು. ಪ್ರೊ. ಪಿ.ಕಷ್ಣ, ಪಂಡಿತಾರಾಧ್ಯ ಇದ್ದರು.

ಪುಟ 3

ಸಂಯುಕ್ತ ಕರ್ನಾಟಕ

12-8-2008



ಬೆಂಗಳೂರಿನ ಶೇಷಾದ್ರಿಪುರಂ ಪ್ರೌಢಶಾಲೆಯಲ್ಲಿ ಶಿಕ್ಷಕರ ಬೆಳವಣಿಗೆ ಕುರಿತು ಆಯೋಜಿಸಿದ್ದ ಕಾರ್ಯಕ್ರಮವನ್ನು ಬೆಂಗಳೂರು ವಿ.ವಿ. ನಿವೃತ್ತ ಉಪಕುಲಪತಿ ಡಾ. ಎಂ.ಎಸ್. ತಿಮ್ಮಪ್ಪ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಎನ್.ಆರ್. ಪಂಡಿತ್ ಆರಾಧ್ಯ, ಗೌರವ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

ಬೆಂಗಳೂರು ವಿಜಯ | ಮಂಗಳವಾರ, 12 ಆಗಸ್ಟ್ 2008

# ತರಗತಿಗಳ ಉದ್ಘಾಟನಾ ಸಮಾರಂಭ

ಬೆಂಗಳೂರು: ಶೇಷಾದ್ರಿಪುರ ಸಂಜೆ ಪದವಿ ಕಾಲೇಜಿನ ಪ್ರಥಮ ಪದವಿ ತರಗತಿಗಳ ಉದ್ಘಾಟನಾ ಸಮಾರಂಭ ನಡೆಯಿತು.

ತುಮಕೂರು ರಾಮಕೃಷ್ಣ ವಿವೇಕಾನಂದ ಅಧ್ಯಕ್ಷರಾದ ಸ್ವಾಮಿ ವೀರೇಶಾನಂದ ಸರಸ್ವತಿ ವಿದ್ಯಾರ್ಥಿಗಳಿಗೆ ಹಿತನುಡಿಗಳನ್ನು ಹೇಳಿ, ಆಶೀರ್ವದಿಸಿದರು. ಶೇಷಾದ್ರಿಪುರ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೆ ಪಿ. ಕೃಷ್ಣ ವಿದ್ಯಾರ್ಥಿಗಳನ್ನು ತಮ್ಮ ಸಂಸ್ಥೆಯ ಬಳಗದವರೆಂದು ಹೇಳಿ ಪ್ರೀತಿಯಿಂದ ಬರಮಾಡಿಕೊಂಡರು. ಸಂಸ್ಥೆಯ ಅಧ್ಯಕ್ಷ ಪಂಡಿತಾರಾಧ್ಯ ಅಧ್ಯಕ್ಷತೆ ವಹಿಸಿದ್ದರು.

ಕಾಲೇಜಿನ ಆಡಳಿತ ಸಲಹಾ ಮಂಡಳಿಯ ಸಿ.ಎಲ್. ಬಸವರಾಜಯ್ಯ ಮತ್ತು ಸಹಾಯಕ ಕಾರ್ಯದರ್ಶಿ ಸರೋಜ ಕೆ.ಎಂ. ನಂಜಪ್ಪ ಅತಿಥಿಗಳಾಗಿ ಭಾಗವಹಿಸಿದ್ದರು. ಕಾಲೇಜಿನ ಪ್ರಾಚಾರ್ಯ ಪ್ರೊ. ಗಾಂಧಿ ದಿವಾನ್ ಪ್ರಭು ಸ್ವಾಗತಿಸಿದರು.



**ಶೇಷಾದ್ರಿಪುರ ಸಂಜೆ ಪದವಿ ಕಾಲೇಜಿನ ಪ್ರಥಮ ಪದವಿ ತರಗತಿಗಳ ಉದ್ಘಾಟನಾ ಸಮಾರಂಭದಲ್ಲಿ ಪ್ರೊ. ಗಾಂಧಿ ದಿವಾನ್ ಪ್ರಭು, ಕೃಷ್ಣಸ್ವಾಮಿ, ವೂಡೆ ಪಿ. ಕೃಷ್ಣ ಸ್ವಾಮಿ ವೀರೇಶಾನಂದ ಸರಸ್ವತಿ, ಎಸ್.ಆರ್. ಪಂಡಿತಾರಾಧ್ಯ, ಸಿ.ಎಲ್. ಬಸವರಾಜಯ್ಯ, ಸರೋಜ ಕೆ.ಎಂ. ನಂಜಪ್ಪ ಉಪಸ್ಥಿತರಿದ್ದರು.**

ಸಂಯುಕ್ತ ಕರ್ನಾಟಕ, ಬೆಂಗಳೂರು

11-8-2008



ಬೆಂಗಳೂರಿನ ಶೇಷಾದ್ರಿಪುರಂ ಸಂಜೆ ಕಾಲೇಜಿನಲ್ಲಿ ನಡೆದ ಪ್ರಥಮ ಪದವಿ ತರಗತಿಗಳ ಉದ್ಘಾಟನಾ ಸಮಾರಂಭದಲ್ಲಿ ತುಮಕೂರು ರಾಮಕೃಷ್ಣ ವಿವೇಕಾನಂದ ಆಶ್ರಮದ ಅಧ್ಯಕ್ಷ ಸ್ವಾಮಿ ವೀರೇಶಾನಂದ ಸರಸ್ವತಿ, ಕಾಲೇಜಿನ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಆಡಳಿತ ಸಲಹಾ ಮಂಡಳಿ ಅಧ್ಯಕ್ಷ ಪ್ರೊ. ಸಿ.ಎಲ್. ಬಸವರಾಜಯ್ಯ, ಸಹ ಕಾರ್ಯದರ್ಶಿ ಸರೋಜ ಕೆ.ಎಂ. ನಂಜಪ್ಪ, ಪ್ರಾಂಶುಪಾಲ ಪ್ರೊ. ಗಾಂಧಿ ದಿವಾನ್‌ಪ್ರಭು ಮತ್ತಿತರರು ಉಪಸ್ಥಿತರಿದ್ದರು.



ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜಿನಲ್ಲಿ ಏರ್ಪಡಿಸಿದ್ದ ಪ್ರಥಮ ಪದವಿ ತರಗತಿಗಳ ಉದ್ಘಾಟನೆಯನ್ನು ರಾಮಕೃಷ್ಣ ವಿವೇಕಾನಂದ ಆಶ್ರಮದ ಶ್ರೀ ಸ್ವಾಮಿ ವೀರೇಶಾನಂದ ಸರಸ್ವತಿ ಸ್ವಾಮಿ ನೆರವೇರಿಸಿದರು. ಪ್ರಾಚಾರ್ಯರಾದ ಪ್ರೊ. ಗಾಂಧಿ ಡಿ. ಪ್ರಭು, ಶೇಷಾದ್ರಿಪುರಂ ಶಿಕ್ಷಣ ದತ್ತಿ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಅಧ್ಯಕ್ಷ ಎನ್. ಆರ್. ಪಂಡಿತಾರಾಧ್ಯ ಮತ್ತಿತರರಿದ್ದರು.

ಸಂಯುಕ್ತ ಕರ್ನಾಟಕ, ಬೆಂಗಳೂರು
7-8-2008



ನಂದಿದುರ್ಗದ ಬಾಲುಗೌಡ ಅವರು ರಚಿಸಿರುವ 'ಆಕ್ಸಿಡೆಂಟ್' ಕೃತಿಯನ್ನು ಸಚಿವ ಬಿ.ಎನ್. ಬಚ್ಚೇಗೌಡ ಬುಧವಾರ ಬೆಂಗಳೂರಿನಲ್ಲಿ ಬಿಡುಗಡೆಗೊಳಿಸಿದರು. ಈ ಸಂದರ್ಭದಲ್ಲಿ ಕೃತಿಕಾರ ನಂದಿದುರ್ಗದ ಬಾಲುಗೌಡ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಗೌರವ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಬೆಂಗಳೂರು ಗ್ರಾಮಾಂತರ ಜಿ.ಪಂ. ಅಧ್ಯಕ್ಷ ಸಿ. ಮುನಿಯಪ್ಪ ಉಪಸ್ಥಿತರಿದ್ದರು.

# ರಸ್ತೆ ಸುರಕ್ಷತಾ ಕ್ರಮ ಪಾಲನೆಗೆ ಸಚಿವರ ಕರೆ

ಬೆಂಗಳೂರು, ಆ. 6: ವಾಹನ ಸವಾರರು ರಸ್ತೆ ಸುರಕ್ಷತಾ ನಿಯಮಗಳನ್ನು ಸರಿಯಾಗಿ ಪಾಲಿಸಿದಲ್ಲಿ ಅಪಘಾತಗಳ ಪ್ರಮಾಣ ಕಡಿಮೆಯಾಗುತ್ತದೆ ಎಂದು ಕಾರ್ಮಿಕ ಸಚಿವ ಬಿ.ಎನ್.ಬಚ್ಚೇಗೌಡ ಇಂದು ಇಲ್ಲಿ ಅಭಿಪ್ರಾಯಪಟ್ಟರು.

ನಂದಿದುರ್ಗದ ಬಾಲುಗೌಡ ಬರೆದಿರುವ 'ಆಕ್ಸಿಡೆಂಟ್' ಕೃತಿ ಬಿಡುಗಡೆ ಮಾಡಿ ಮಾತನಾಡಿದ ಅವರು, ನಮ್ಮಲ್ಲಿ ರಸ್ತೆ ಸುರಕ್ಷತಾ ನಿಯಮಗಳ ಬಗ್ಗೆ ಅರಿವಿದ್ದರೂ ಪಾಲನೆ ಮಾಡದಿರುವುದು ದುರದೃಷ್ಟಕರ ಎಂದು ಹೇಳಿದರು.



ಬೆಂಗಳೂರಿನಲ್ಲಿ ಬುಧವಾರ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಕಾರ್ಮಿಕ ಸಚಿವ ಬಿ.ಎನ್.ಬಚ್ಚೇಗೌಡ 'ಆಕ್ಸಿಡೆಂಟ್' ಕೃತಿ ಬಿಡುಗಡೆ ಮಾಡಿದರು. ಐಪಿಎಸ್ ಅಧಿಕಾರಿ ಕೆ.ವಿ.ಆರ್.ಠ್ಯಾಗೂರ್, ಗ್ರಾಮಾಂತರ ಜಿಲ್ಲಾ ಪಂಚಾಯತ್ ಅಧ್ಯಕ್ಷ ಮುನಿಯಪ್ಪ, ಲೇಖಕ ಬಾಲುಗೌಡ ಉಪಸ್ಥಿತರಿದ್ದರು.

ವಿದೇಶಗಳಲ್ಲಿ ಸರ್ಕಾರ ಒಂದು ಕಾನೂನು ಮಾಡಿದರೆ ಅದನ್ನು ಚಾಚೂ ತಪ್ಪದೆ ಪಾಲಿಸಲಾಗುತ್ತದೆ. ಇದರಿಂದ ತಮಗೇ ಒಳಿತು ಎಂಬುದನ್ನು ಅಲ್ಲಿನ ಜನರು ಸರಿಯಾಗಿ ಮನದಟ್ಟು ಮಾಡಿಕೊಂಡಿದ್ದಾರೆ. ಇಲ್ಲಿ ಕಾನೂನು ಪಾಲಕರ ಸಂಖ್ಯೆ ಕಡಿಮೆ ಎಂದು ತಿಳಿಸಿದರು.

ಆಕ್ಸಿಡೆಂಟ್ ಕೃತಿಯು ಅಪಘಾತಗಳನ್ನು ತಡೆಯುವ ಬಗ್ಗೆ ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವ ಕೃತಿಯಾಗಿದೆ ಎಂದು ಶ್ಲಾಘಿಸಿದರು.

ಅತಿಥಿಯಾಗಿದ್ದ ನಿವೃತ್ತ ಐಪಿಎಸ್ ಅಧಿಕಾರಿ ಕೆ.ವಿ.ಆರ್. ಠ್ಯಾಗೂರ್, ಬೆಂಗಳೂರಿನಲ್ಲಿ ವಾಹನ ದಟ್ಟಣೆ ದೊಡ್ಡ ಸಮಸ್ಯೆಯಾಗಿದೆ. ಸಮೂಹ ಸಾರಿಗೆಯೊಂದೇ ಇದಕ್ಕೆ ಪರಿಹಾರವಾಗಿದೆ ಎಂದು ಹೇಳಿದರು.

ಅಪಘಾತ ನಿರ್ವಹಣೆಗಾಗಿ ಸಂಚಾರಿ ನಿಯಮ ಉಲ್ಲಂಘಟನೆ ಮಾಡಿದವರ ಮೇಲೆ ದಂಡ ವಿಧಿಸಿ ವಾರ್ಷಿಕ 60 ಕೋಟಿ ರೂ. ಸಂಗ್ರಹ ಮಾಡಲಾಗುತ್ತಿದೆ. ಆ ಹಣವನ್ನು ಸಂಪೂರ್ಣವಾಗಿ ಬಳಕೆ ಮಾಡಿದರೆ ಸಂಚಾರ ನಿಯಂತ್ರಣ ಕಾರ್ಯಕ್ರಮ ರೂಪಿಸಬಹುದಾಗಿದೆ ಎಂದು ಹೇಳಿದರು.

ಬೆಂಗಳೂರು ವಿಜಯ | ಬುಧವಾರ, 6 ಆಗಸ್ಟ್ 2008

# ಅಧ್ಯಯನ ನಿರಂತರವಾಗಿರಲಿ

ಬೆಂಗಳೂರು: ನಿರಂತರ ಅಧ್ಯಯನದಲ್ಲಿ ವಿದ್ಯಾರ್ಥಿಗಳು ತೊಡಗಿಕೊಳ್ಳುವಂತೆ ಮಾಡುವುದೇ ಶಿಕ್ಷಣದ ಗುರಿಯಾಗಬೇಕು ಎಂದು ವಿಧಾನ ಪರಿಷತ್ ಸದಸ್ಯ ಡಾ. ದೊಡ್ಡರಂಗೇಗೌಡ ಹೇಳಿದ್ದಾರೆ.

ಶೇಷಾದ್ರಿಪುರಂ ಕಾಲೇಜಿನ ಪ್ರಥಮ ಪದವಿ ತರಗತಿ ಉದ್ಘಾಟಿಸಿ ಅವರು ಮಾತನಾಡಿದರು.

ಅಧ್ಯಯನ ಎಂಬುದು ಅಂತರಂಗದ ಹಸಿವಾಗಬೇಕು. ಅಧ್ಯಯನಕ್ಕೆ ಪೂರಕ ಮಾಹಿತಿ ಸಂಗ್ರಹಿಸುವುದು ಆಧುನಿಕ ಯುಗದಲ್ಲಿ ಕಷ್ಟವಲ್ಲ. ಈ ಹಿನ್ನೆಲೆಯಲ್ಲಿ ಅಮೂಲ್ಯ ಸಮಯವನ್ನು ವ್ಯರ್ಥ ಮಾಡಿಕೊಂಡು ಅನಂತರ ಪಶ್ಚಾತ್ತಾಪ ಪಡದೇ ವಿದ್ಯಾರ್ಥಿ ಬದುಕಿನಲ್ಲಿ ಸಿಗುವ ಸಮಯವನ್ನು ಸದುಪಯೋಗ ಪಡಿಸಿಕೊಳ್ಳಬೇಕು ಎಂದು ತಿಳಿಸಿದರು.

ಹದಿಹರೆಯ ಎಂಬುದು ಆಸೆ, ಕನಸುಗಳು ಹುಟ್ಟುವ ಸಮಯ. ವಿದ್ಯಾರ್ಥಿಯು ತನ್ನ ಭವಿಷ್ಯ ರೂಪಿಸಿಕೊಳ್ಳಲು ಕನಸು ಪೂರಕವಾಗಿರಲಿ. ಹೀಗಾದಾಗ ವ್ಯಕ್ತಿ ಏನನ್ನಾದರೂ ಸಾಧಿಸಲು ಸಾಧ್ಯ ಎಂದು ಅಭಿಪ್ರಾಯಪಟ್ಟರು.

ಜ್ಞಾನವೆನ್ನುವುದು ಸಾಗರವಿದ್ದ ಹಾಗೆ. ಹೆಚ್ಚು ಬೊಗಸೆ ಜ್ಞಾನವನ್ನು ಮೊಗೆಯಲು ಶ್ರಮಿಸಬೇಕು ಎಂದು ತಿಳಿಸಿದರು.

ಸಂಸ್ಥೆಯ ಅಧ್ಯಕ್ಷ ಪಂಡಿತಾರಾಧ್ಯ ಮಾತನಾಡಿ, ದೇಶದ ಉತ್ತಮ ಭವಿಷ್ಯಕ್ಕೆ ಯುವಜನತೆಯ ಪಾತ್ರ ಮುಖ್ಯ. ಅದರಲ್ಲೂ ಯುವತಿಯರ ಪಾತ್ರ ವಿಶಿಷ್ಟವಾದದ್ದು ಎಂದು ಹೇಳಿದರು.

ಸಂಸ್ಥೆಯ ಕಾರ್ಯದರ್ಶಿ ವೂಡೇ" ಪಿ.ಕೃಷ್ಣ ಮಾತನಾಡಿ, ಸಂಸ್ಕೃತಿ ಮತ್ತು ತಂತ್ರಜ್ಞಾನ, ಜ್ಞಾನಾರ್ಜನೆ ಮತ್ತು ಸಾಮಾಜಿಕ ಬದ್ಧತೆಗಳು ಜತೆಯಾಗಿದ್ದಾಗ ಮಾತ್ರ ವಿದ್ಯಾರ್ಥಿಗಳು ಸಮಾಜದಲ್ಲಿ ತಮ್ಮ ಸ್ಥಾನ ಭದ್ರಪಡಿಸಿಕೊಳ್ಳಲು ಸಾಧ್ಯ ಎಂದರು.

ಪ್ರಾಂಶುಪಾಲ ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ ಮಾತನಾಡಿ, ವಿದ್ಯಾರ್ಥಿ ಗಳಿಗೆ ಶಿಕ್ಷಣ ನೀಡಿ, ಪದವಿ ಗಳಿಸಿಕೊಡು ವುದಲ್ಲದೆ ಅವರಿಗೆ ಉದ್ಯೋಗಾವಕಾಶ ಕಲ್ಪಿಸಲಾಗುತ್ತಿದೆ ಎಂದು ಹೇಳಿದರು.

ಸಂಸ್ಥೆಯ ಧರ್ಮದರ್ಶಿಗಳಾದ ಸರೋಜಾ ನಂಜಪ್ಪ, ಎಂ.ಎಸ್.ನಟರಾಜ್, ಹೆಂಜಾರಪ್ಪ ಮತ್ತು ಕೃಷ್ಣಸ್ವಾಮಿ ಉಪಸ್ಥಿತರಿದ್ದರು.



**ಶೇಷಾದ್ರಿಪುರಂ ಕಾಲೇಜಿನ ಪ್ರಥಮ ಪದವಿ ತರಗತಿಯನ್ನು ವಿಧಾನ ಪರಿಷತ್ ಸದಸ್ಯ ಡಾ.ದೊಡ್ಡರಂಗೇಗೌಡ ಉದ್ಘಾಟಿಸಿದರು. ಪ್ರಾಂಶುಪಾಲ ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ, ಸಂಸ್ಥೆಯ ಕಾರ್ಯದರ್ಶಿ ವೂಡೇ ಪಿ.ಕೃಷ್ಣ ಸಂಸ್ಥೆಯ ಧರ್ಮದರ್ಶಿಗಳಾದ ಸರೋಜಾ ನಂಜಪ್ಪ ಎಂ.ಎಸ್.ನಟರಾಜ್ ಭಾಗವಹಿಸಿದ್ದರು.**

ಈ ಸಂಜೆ

ಬುಧವಾರ 6 ಆಗಸ್ಟ್ 2008



ನಗರದ ಎನ್‌ಜಿಓ ಸಭಾಂಗಣದಲ್ಲಿ ಆಕ್ಸಿಡೆಂಟ್ ಪತ್ರಿಕೆಯನ್ನು ಕಾರ್ಮಿಕ ಸಚಿವ ಬಿ.ಎನ್. ಬಚ್ಚೇಗೌಡ, ಹಿರಿಯ ಅಧಿಕಾರಿ ಕೆ.ವಿ.ಆರ್. ಠ್ಯಾಗೂರ್, ಜಿ.ಪಂಚಾಯತ್ ಅಧ್ಯಕ್ಷ ಗೋಪಾಲಕೃಷ್ಣ, ನಂದಿದುರ್ಗದ ಬಾಲು ಗೌಡ ಮತ್ತಿತರರು ಬಿಡುಗಡೆ ಮಾಡಿದರು.